# "ಕಿಕ್ಕೇರಿ ಮತ್ತು ನುಗ್ಗೇಹಳ್ಳಿ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ – ಒಂದು ವಿವರಣಾತ್ಮಕ ಅಧ್ಯಯನ"

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಶಾಸ್ತ್ರ
ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ನಿಬಂಧ

ಸಂಶೋಧಕ
ವೆಂಕಟೇಶ

ಮಾರ್ಗದರ್ಶಕರು
ಎಂ.ಕೆ. ಮೃತ್ಯುಂಜಯ




ಕರ್ನಾಟಕ ಸಂಘ (ರಿ), ಮಂಡ್ಯ
.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಡ ವಿಶ್ವ ವಿದ್ಯಾನಿಲಯದ ಮಾನ್ಯತೆ ಪಡೆದಿದೆ)
2007-08

# "ಕಿಕ್ಕೇರಿ ಮತ್ತು ನುಗ್ಗೇಹಳ್ಳಿ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ – ಒಂದು ವಿವರಣಾತ್ಮಕ ಅಧ್ಯಯನ"

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಶಾಸ್ತ್ರ
ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ನಿಬಂಧ

ಸಂಶೋಧಕ
**ವೆಂಕಟೇಶ**

ಮಾರ್ಗದರ್ಶಕರು
**ಎಂ.ಕೆ. ಮೃತ್ಯುಂಜಯ**






ಕರ್ನಾಟಕ ಸಂಘ (ರಿ), ಮಂಡ್ಯ
ಎಂ.ಎಲ್. ಶ್ರೀಕಂಠೇಶಗೌಡ ಸಂಶೋದನಾ ಕೇಂದ್ರ
(ಕನ್ನಡ ವಿಶ್ವ ವಿದ್ಯಾನಿಲಯದ ಮಾನ್ಯತೆ ಪಡೆದಿದೆ)
2007-08

## ಸಂಶೋಧಕನ ಪ್ರಮಾಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2007-08ನೇಯ ಸಾಲಿಗೆ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಶಾಸ್ತ್ರದ ಎಂ.ಫಿಲ್. ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಕಿಕ್ಕೇರಿ ಮತ್ತು ನುಗ್ಗೇಹಳ್ಳಿ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ – ಒಂದು ವಿವರಣಾತ್ಮಕ ಅಧ್ಯಯನ"** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಎಂ.ಕೆ. ಮೃತ್ಯುಂಜಯ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂದವನ್ನು ರಚಿಸಿರುತ್ತೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಡಿಕರಿಸುತ್ತೇನೆ.

ದಿನಾಂಕ: 10-09-2008
ಸ್ಥಳ : ಮಂಡ್ಯ

**(ವೆಂಕಟೇಶ)**
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಶಾಸ್ತ್ರ ವಿಭಾಗದ
ಎಂ.ಫಿಲ್. ಅಭ್ಯರ್ಥಿ,
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ (ರಿ), ಮಂಡ್ಯ

## ಮಾರ್ಗದರ್ಶಕರ ಪ್ರಮಾಣ ಪತ್ರ

**"ಕಿಕ್ಕೇರಿ ಮತ್ತು ನುಗ್ಗೇಹಳ್ಳಿ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ – ಒಂದು ವಿವರಣಾತ್ಮಕ ಅಧ್ಯಯನ"** ಎಂಬ ಪ್ರಬಂಧವನ್ನು ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವಶಾಸ್ತ್ರ ಎಂ.ಫಿಲ್. ಪದವಿಗಾಗಿ ಶ್ರೀ ವೆಂಕಟೇಶ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢಿಕರಿಸುತ್ತೇನೆ.

ಸ್ಥಳ: ಮಂಡ್ಯ

ದಿನಾಂಕ: 10-9-2008

M.K. Mruthyunjaya

**(ಎಂ.ಕೆ. ಮೃತ್ಯುಂಜಯ)**
ಇತಿಹಾಸ ಉಪನ್ಯಾಸಕರು
ಶ್ರೀ ಚನ್ನಕೇಶವ ಪ್ರಥಮದರ್ಜೆ ಕಾಲೇಜು,
ಸಾಲಿಗ್ರಾಮ

M. K. Mruthyunjaya, M.A.
Dept. of History
Sri Chann... College
...571 604

# ಪರಿವಿಡಿ

# ಅಧ್ಯಾಯ – 1

## ಪೀಠಿಕೆ

ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಹೊಯ್ಸಳರ ಹೆಸರು ಚಿರಸ್ಥಾಯಿಯಾಗಿ ಉಳಿದಿದೆ. ಇವರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳಿಂದ ರಾಜಕೀಯ, ಸಾಂಸ್ಕೃತಿಕ ಮತ್ತು ಧಾರ್ಮಿಕ ಚಟುವಟಿಕೆಗಳನ್ನು ಅವಲೋಕಿಸಬಹುದು. ಕ್ರಿ.ಶ. 11ನೆಯ ಶತಮಾನದಿಂದ 14ನೆಯ ಶತಮಾನದವರೆಗೆ ಕರ್ನಾಟಕದ ದಕ್ಷಿಣ ಭಾಗದಲ್ಲಿ ಆಡಳಿತ ನಡೆಸಿದ ಇವರು ತಮ್ಮದೆ ಆದಂತಹ ವಿಶಿಷ್ಠ ಕೊಡುಗೆಗಳನ್ನು ನೀಡಿದ್ದಾರೆ. ಇವರ ಇತಿಹಾಸವನ್ನು ತಿಳಿಯಲು ನಮಗೆ ವಿಪುಲವಾದಂತಹ ಶಾಸನ ಸಂಪತ್ತು, ನಾಣ್ಯಗಳು, ಜೊತೆಗೆ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಇವರ ಇತಿಹಾಸದ ಜೊತೆ ಜೊತೆಗೆ ದೇವಾಲಯಗಳ ಮತ್ತು ಶಿಲ್ಪಗಳ ಬಗೆಗೆ ಹೀಗಾಗಲೆ ಅಧ್ಯಯನಗಳು ನಡೆದಿವೆ. ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳಲ್ಲಿ ಪ್ರಮುಖವಾಗಿ ಅವರ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಮತ್ತು ವಾಸ್ತು ಕಲೆಯ ಬಗೆಗೆ ಸವಿವರವಾದ ವಿವರಣೆಯನ್ನು ನೀಡಿದ್ದಾರೆ. ಹೊಯ್ಸಳರ ಇತಿಹಾಸದ ಬಗೆಗೆ ಅಭ್ಯಸಿಸಲು ಅವರ ಕಾಲದ ನೂರಾರು ಸಂಖ್ಯೆಯ ಶಾಸನಗಳು ದೊರೆತಿವೆ. ಇವುಗಳನ್ನು ಓದಿ ವಿಮರ್ಶಿಸಿ ಅಧ್ಯಯನ ಮಾಡಿದ ವಿದ್ವಾಂಸರುಗಳು ಅವರ ಕಾಲದ ವಿಭಿನ್ನ ಚಟುವಟಿಕೆಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಇವುಗಳ ಹಿನ್ನೆಲೆಯಲ್ಲಿ ಇವರ ಕಾಲದ ವಾಸ್ತು ಮತು ಶಿಲ್ಪಕಲೆಯ ಬೆಳವಣಿಗೆಯನ್ನು ಕುರಿತಂತೆ ಅಧ್ಯಯನ ಕೈಗೊಂಡಾಗ ಹಲವಾರು ಹೊಸ ವಿಷಯಗಳು ಬೆಳಕಿಗೆ ಬರುತ್ತವೆ. ಹೀಗಾಗಲೆ ನಡೆದಿರುವ ಅಧ್ಯಯನಗಳನ್ನು ಅವಲೋಕಿಸಿ ಬೆಳಕಿಗೆ ಬಾರದಂತಹ ಎಷ್ಟೊ ವಿಷಯಗಳು ಇನ್ನೂ ದೊರೆಯುತ್ತಲೆ ಇವೆ. ಆದರೆ ಇವುಗಳಲ್ಲಿ ಯಾವೊಂದು ಅಧ್ಯಯನವು ಏಕರೂಪವಾಗಿರುವುದಿಲ್ಲ. ವಿದ್ವಾಂಸರ ದೃಷ್ಠಿಕೋನಗಳು ಅವರದೇ ಆದ ರೀತಿಯಲ್ಲಿ ನಡೆದಿರುತ್ತವೆ. ಪ್ರಸ್ತುತವಾಗಿ ನನ್ನ ಸಂಶೋಧನಾ ವಿಷಯ ಒಂದು ಕಿರು ಹೆಜ್ಜೆ ಮಾತ್ರ.

ಈ ಸಂಶೋಧನೆಯಲ್ಲಿ ಕಿಕ್ಕೇರಿ ಮತ್ತು ನುಗ್ಗೇಹಳ್ಳಿಯಲ್ಲಿರುವ ದೇವಾಲಯಗಳ ವಾಸ್ತು ಮತ್ತು ಶಿಲ್ಪಕಲೆಯ ಬಗ್ಗೆ ಅಧ್ಯಯನ ನಡೆಸಿದ್ದೇನೆ. ಕಿಕ್ಕೇರಿಯ ಬ್ರಹ್ಮೇಶ್ವರ, ಜನಾರ್ಧನ, ಮಲ್ಲೇಶ್ವರ ಮತ್ತು ಲಕ್ಷ್ಮೀನರಸಿಂಹ ಹಾಗೂ ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ, ಸದಾಶಿವ ಮತ್ತು ಮಾರ್ಕಂಡೇಯ ದೇವಾಲಯಗಳು ಇಲ್ಲಿ ಪ್ರಮುಖ ಚರ್ಚಾವಸ್ತು ವಿಷಯಗಳಾಗಿವೆ. ಈ ದೇವಾಲಯಗಳು ಹೊಯ್ಸಳರ ವಾಸ್ತು ಮತ್ತು ಶಿಲ್ಪ ಕಲೆಯ ಪ್ರಾರಂಭದ ಹಂತದಿಂದ ಬೆಳವಣಿಗೆಯ ಹಂತದವರೆಗಿನ ಅತ್ಯಂತ ಮಹತ್ವದ ವಿಷಯವನ್ನು ನೀಡುತ್ತವೆ. ಇವುಗಳ

ನಿರ್ಮಾಣದ ಕಾಲ, ವಾಸ್ತು ಶೈಲಿ, ಬಿಡಿ ಶಿಲ್ಪಗಳು, ಭಿತ್ತಿ ಶಿಲ್ಪಗಳು, ಕಥಾನಕ ಶಿಲ್ಪಗಳು ಮತ್ತು ಇನ್ನಿತರ ಅಲಂಕಾರಗಳು ಹಾಗು ವಿವಿಧ ವಿನ್ಯಾಸದ ಆಕೃತಿಗಳ ರಚನೆಯು ಇಲ್ಲಿ ವಿಶೇಷವಾಗಿ ಗಮನಸೆಳೆಯುತ್ತವೆ. ಈ ದೇವಾಲಯಗಳ ಹಿನ್ನೆಲೆಯನ್ನು ಗಮನಿಸಿದರೆ ಇವುಗಳ ನಿರ್ಮಾಣಕ್ಕಿಂತ ಹಿಂದೆಯೇ ಹಲವಾರು ದೇವಾಲಯಗಳು ದಕ್ಷಿಣ ಕರ್ನಾಟಕದಲ್ಲಿ ನಿರ್ಮಾಣವಾಗಿರುವುದನ್ನು ನೋಡಬಹುದು. ಇವುಗಳಿಗೆ ಉದಾಹರಣೆಯಾಗಿ ಬಾದಾಮಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳು. ಕರ್ನಾಟಕವನ್ನಾಳಿದ ಅನೇಕ ಮನೆತನಗಳಲ್ಲಿ ಹೊಯ್ಸಳರು ಸಹ ಪ್ರಮುಖರಾಗಿದ್ದಾರೆ. ಇವರ ಕಾಲದಲ್ಲಿ ಹಿಂದೆಂದು ಕಾಣದಷ್ಟು ವಿಭಿನ್ನ ಶೈಲಿಯಲ್ಲಿ ದೇವಾಲಯಗಳು ನಿರ್ಮಾಣವಾದವು. ಹೊಯ್ಸಳ ರಾಜರುಗಳಾದ ವಿಷ್ಣುವರ್ಧನ, ನರಸಿಂಹ ಮತ್ತು ಎರಡನೆ ಬಲ್ಲಾಳನ ಕಾಲದಲ್ಲಿ ಹೊಯ್ಸಳ ವಾಸ್ತುಶಿಲ್ಪವು ಒಂದು ಘಟ್ಟವನ್ನು ತಲುಪಿತ್ತು ಎಂದು ಹೇಳಬಹುದು. ಇವರ ಕಾಲದಲ್ಲಿ ನಿರ್ಮಾಣವಾದಂತಹ ವಾಸ್ತು ಶೈಲಿಯು ತನ್ನದೇ ಆದಂತಹ ಒಂದು ಹೆಸರನ್ನು ಪಡೆದು ಅದು ಹೊಯ್ಸಳ ವಾಸ್ತು ಶೈಲಿ ಎಂದೇ ಪ್ರಸಿದ್ಧವಾಯಿತು.

ಹೊಯ್ಸಳರು ದೇವಾಲಯಗಳನ್ನು ನಿರ್ಮಿಸುವಾಗ ನಕ್ಷತ್ರಾಕಾರದ ಮತ್ತು ಚೌಕಾಕಾರದ ಹಾಗೂ ಆಯತಾಕಾರದ ತಲವಿನ್ಯಾಸಗಳನ್ನು ಹೊಂದಿರಚನೆಗೊಂಡವು. ಇವರ ಕಾಲದ ದೇವಾಲಯಗಳ ಮತ್ತೊಂದು ವಿಶೇಷವೆಂದರೆ ದ್ರಾವಿಡ ಮತ್ತು ನಾಗರ ವಾಸ್ತುವನ್ನೊಳಗೊಂಡ ವೇಸರ ಶೈಲಿಯೂ ಸಹ ಬಹಳ ಪ್ರಸಿದ್ಧಿಯಾಗಿತ್ತು. ಹೊಯ್ಸಳರ ರಾಜಕೀಯ ಇತಿಹಾಸವನ್ನು ಅವಲೋಕಿಸಿದಾಗ ಇವರು ಮೊದಲಿಗೆ ಕಲ್ಯಾಣ ಚಾಲುಕ್ಯರ ಸಾಮಂತರಾಜರಾಗಿದ್ದು ನಂತರದಲ್ಲಿ ಸ್ವತಂತ್ರ ರಾಜರಾಗಿ ಆಳ್ವಿಕೆಯನ್ನು ನಡೆಸಿದರು. ಆದುದರಿಂದ ಇವರು ಚಾಳುಕ್ಯ ಮತ್ತು ಕಲ್ಯಾಣಿ ಚಾಲುಕ್ಯರ ಶೈಲಿಗಳ ಪ್ರಮುಖ ವಾಸ್ತುವಾಂಶವನ್ನು ಅವಲಂಬಿಸಿಕೊಂಡು ತಮ್ಮದೇ ಆದಂತಹ ಒಂದು ಸ್ಪಷ್ಟವಾದಂತಹ ಆಕಾರವನ್ನು ನೀಡಿದರು.[1] ಇವರ ಕಾಲದಲ್ಲಿ ಇಷ್ಟೊಂದು ಕಲಾಕೃತಿಗಳು ಬೆಳೆಯಲು ಮತ್ತೊಂದು ಕಾರಣವೆಂದರೆ ಇವರು ಬಳಸಿದ ಮಾಧ್ಯಮ. ಇವರು ದೇವಾಲಯಗಳನ್ನು ನಿರ್ಮಿಸಲು ಬಳಸಿದ ಮಾಧ್ಯಮದಲ್ಲಿ ಪ್ರಮುಖವಾಗಿ ಸೋಪುಗಲ್ಲನ್ನು ಬಳಸಿದರು. ಇದರ ಪ್ರಮುಖ ಲಕ್ಷಣಗಳೆಂದರೆ ಇದು ಭೂಮಿಯೊಳಗೆ ಇದ್ದಾಗ ಬಹಳ ಮೃದುವಾಗಿದ್ದು ಹೊರತೆಗೆದಾಗ ಗಟ್ಟಿಯಾಗುತ್ತದೆ. ಇದು ಸ್ವಲ್ಪ ನೀಲಿಬಣ್ಣದಿಂದ ಕೂಡಿದ್ದು ಕಪ್ಪಾಗಿದ್ದು ಶಿಲ್ಪಗಳ ರಚನೆಗೆ ಪೂರಕವಾದಂತಹ ವಸ್ತುವಾಗಿದೆ. ಇವರ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳೆಲ್ಲವು ಸಹ ಸೋಪುಗಲ್ಲಿನಿಂದ ಆದವುಗಳಲ್ಲ. ಕೆಲವು ದೇವಾಲಯಗಳನ್ನು ಒರಟು ಗ್ರಾನೈಟ್ ಶಿಲೆಯಿಂದಲೂ ದ್ರಾವಿಡ ಮಾದರಿಯಲ್ಲೂ ಕಟ್ಟಿರುವಂತಹ ಉದಾಹರಣೆಗಳು ಬಹಳಷ್ಟಿವೆ. ಇವರು

ತಮ್ಮದೇ ಆದಂತಹ ಭವ್ಯವಾದ ಸುಂದರ ದೇವಾಲಯ ವಾಸ್ತುಶಿಲ್ಪ ಶೈಲಿಯನ್ನು ರೂಪಿಸಿಕೊಂಡು ಅತ್ಯಂತ ಭವ್ಯವಾದ ದೇವಾಲಯಗಳನ್ನು ರೂಪಿಸಿದರು. ಇವರ ಕಾಲದಲ್ಲಿ ನಿರ್ಮಾಣವಾದಂತಹ ಬೇಲೂರು, ಹಳೆಬೀಡು ಮತ್ತು ಸೋಮನಾಥಪುರ ಇನ್ನೂ ಮುಂತಾದ ಹಲವು ದೇವಾಲಯಗಳು ತಮ್ಮ ಅಪೂರ್ವ ಸೌಂದರ್ಯದಿಂದ ಜಗದ್ವಿಖ್ಯಾತಿಯನ್ನು ಪಡೆದಿವೆ. ಇವೆಲ್ಲ ಸಾಧನೆಗಳು ಹೊಯ್ಸಳರ ಆಳ್ವಿಕೆಯನ್ನು ಕರ್ನಾಟಕದ ಇತಿಹಾಸದಲ್ಲಿ ಆಕರ್ಷಕ ಅಧ್ಯಾಯವನ್ನಾಗಿಸಿವೆ.

ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದಂತಹ ಎಲ್ಲ ದೇವಾಲಯಗಳ ವಾಸ್ತು ಮತ್ತು ಶಿಲ್ಪ ಕಲೆಗಳು ಒಂದಲ್ಲ ಒಂದು ರೀತಿಯಲ್ಲಿ ವಿಶೇಷವಾದಂತಹ ಅಂಶಗಳನ್ನು ಒಳಗೊಂಡಿರುತ್ತವೆ. ಇವರ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳನ್ನು ಗಮನಿಸಿದಾಗ ವಾಸ್ತುಶಿಲ್ಪದಲ್ಲಿ ಶ್ರೀಮಂತಿಕೆಯನ್ನು ಹೊಂದಿರುವಂತಹ ಕೆಲವೇ ಕೆಲವು ದೇವಾಲಯಗಳನ್ನು ತೆಗೆದುಕೊಂಡು ಅಧ್ಯಯನ ನಡೆಸಿದರೆ ಅವುಗಳ ವಾಸ್ತು ವಿನ್ಯಾಸ ಮತ್ತು ಶಿಲ್ಪಗಳ ಲಕ್ಷಣಗಳನ್ನು ಸವಿವರವಾಗಿ ತಿಳಿದುಕೊಳ್ಳಲು ಸಹಾಯವಾಗುತ್ತದೆ. ಇಂತಹ ಕೆಲಸಗಳಿಂದ ಅಂತಹ ದೇವಾಲಯಗಳ ಅಧ್ಯಯನದ ಪರಿವ್ಯಾಪ್ತಿಯನ್ನು ಆ ಕಾಲಘಟ್ಟದಲ್ಲಿ ನಿರ್ಮಾಣವಾದಂತಹ ಇನ್ನಿತರ ದೇವಾಲಯಗಳಿಗೂ ಸಹ ಅನ್ವಯಿಸಬಹುದಾಗಿದೆ. ಆದುದರಿಂದ ಶಿಲ್ಪ ಮತ್ತು ವಾಸ್ತುಶಿಲ್ಪದಲ್ಲಿ ವಿಶಿಷ್ಠವಾದಂತಹ ಶೈಲಿಗಳನ್ನು ಹೊಂದಿರುವ ಕಿಕ್ಕೇರಿ ಮತ್ತು ನುಗ್ಗೇಹಳ್ಳಿಯಲ್ಲಿ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳನ್ನು ಪ್ರಸ್ತುತ ಅಧ್ಯಯನದ ಪ್ರಮುಖ ವಸ್ತು ವಿಷಯವಾಗಿ ತೆಗೆದುಕೊಂಡಿದ್ದೇನೆ.

ಕಿಕ್ಕೇರಿಯ ಬ್ರಹ್ಮೇಶ್ವರ ದೇವಾಲಯವು ಏಕಕೂಟ ದೇವಾಲಯವಾಗಿದ್ದು ನಕ್ಷತ್ರ ಮತ್ತು ಚತುರಸ್ರ ವಿನ್ಯಾಸಗಳ ಮಿಶ್ರಣವನ್ನು ಹೊಂದಿದೆ. ಇದರ ಭಿತ್ತಿಯಲ್ಲಿ ಶಿಲ್ಪಗಳನ್ನು ಹೊಂದಿದೆ. ನವರಂಗದಲ್ಲಿರುವ ಕಂಭಗಳಲ್ಲಿ ಮದನಿಕೆಯರ ಶಿಲ್ಪಗಳು ಸಹ ಇವೆ. ಅಧಿಷ್ಠಾನದ ದಂತಪಂಕ್ತಿಯ ದಿಂಡುಗಳಲ್ಲಿ ದೇವತೆಗಳ ಶಿಲ್ಪ, ನೃತ್ಯಗಾರ್ತಿಯರು, ವ್ಯಾಳ, ವ್ಯಾಘ್ರ, ಮತ್ತು ಮಿಥುನ ಶಿಲ್ಪಗಳನ್ನು ಕೆತ್ತಲಾಗಿದೆ. ಇದು ಏಕಕೂಟವಾದ ದೇವಾಲಯವಾಗಿದ್ದು ಹೊರ ಅಲಂಕರಣವಾದ ಭಿತ್ತಿಶಿಲ್ಪಗಳನ್ನು ಹೊಂದಿದೆ. ಇದಲ್ಲದೇ ಈ ಊರಿನಲ್ಲಿ ಲಕ್ಷ್ಮೀನರಸಿಂಹ ದೇವಾಲಯವಿದ್ದು ಇದು ಸಹ ಹೊಯ್ಸಳರ ವಾಸ್ತುಶೈಲಿಯನ್ನು ಹೊಂದಿದೆ. ಇದಲ್ಲದೆ ಇಲ್ಲಿ ಶಿಥಿಲವಾಗಿರುವ ಜನಾರ್ಧನ ದೇವಾಲಯವಿದೆ. ಇದು ಸಹ ಬ್ರಹ್ಮೇಶ್ವರ ದೇವಾಲಯದ ಭಿತ್ತಿಶಿಲ್ಪದ ಲಕ್ಷಣಗಳಂತೆ ಇಲ್ಲಿಯೂ ಸಹ ಇವೆ. ಆದರೆ ಅವುಗಳನ್ನು ಸ್ಪಷ್ಟವಾಗಿ ಗುರುತಿಸಲು ಆಗುತ್ತಿಲ್ಲ. ಏಕೆಂದರೆ ಪ್ರಕೃತಿಗೆ ಹಾಗೂ ಸ್ಥಳೀಯರ ಪುಂಡಾಟಿಕೆಗೆ ಇವುಗಳ ಬಹಳಷ್ಟು ಭಾಗ ಭಗ್ನವಾಗಿವೆ. ಇದಲ್ಲದೆ ಕೆರೆಯ ಪೂರ್ವ ಭಾಗದಲ್ಲಿ

ಮಲ್ಲೇಶ್ವರ ದೇವಾಲಯವಿದೆ. ಆದರೆ ಈ ದೇವಾಲಯವನ್ನು ಬ್ರಹ್ಮೇಶ್ವರ ಹಾಗೂ ಜನಾರ್ಧನ ದೇವಾಲಯಗಳನ್ನು ನಿರ್ಮಾಣ ಮಾಡುವುದಕ್ಕೂ ಪೂರ್ವದಲ್ಲಿಯೇ ನಿರ್ಮಿಸಲಾಗಿದೆ.

ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ ದೇವಾಲಯವು ಸೋಮೇಶ್ವರನ ದಂಡನಾಯಕನಾದ ಬೊಮ್ಮಣ್ಣನಿಂದ ಕ್ರಿ.ಶ.1246ರಲ್ಲಿ ನಿರ್ಮಾಣವಾಯಿತು.[2] ಇದೆ ಕಾಲದಲ್ಲಿ ಸದಾಶಿವ ದೇವಾಲಯವು ಕೂಡ ಆ ಕಾಲದಲ್ಲಿಯೆ ನಿರ್ಮಾಣವಾಯಿತು.[3] ಇಲ್ಲಿಯ ಮತ್ತೊಂದು ದೇವಾಲಯವಾದ ಚಂದ್ರಮೌಳೇಶ್ವರ ದೇವಾಲಯವು ಸಹ ಪೂರ್ವ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದ ದೇವಾಲಯವಾಗಿದೆ. ಇದರ ನಿರ್ಮಾಣದ ಕಾಲ ಹಾಗೂ ನಿರ್ಮಾತೃರು ಯಾರೆಂದು ತಿಳಿಯಲು ಯಾವುದೇ ಶಾಸನಗಳು ದೊರೆತಿಲ್ಲ. ಲಕ್ಷ್ಮಿನರಸಿಂಹ ದೇವಾಲಯವು ತ್ರಿಕೂಟಾಚಲ ದೇವಾಲಯವಾಗಿದ್ದು ದ್ರಾವಿಡ ಶೈಲಿಯನ್ನು ಹೊಂದಿದೆ. ದೇವಾಲಯದ ಹೊರ ಭಿತ್ತಿಯು ಶಿಲ್ಪಗಳಿಂದ ಅಲಂಕೃತವಾಗಿದೆ. ಈ ಶಿಲ್ಪಗಳಲ್ಲಿ ಹಿಂದೆ ಇದ್ದ ಹೊಯ್ಸಳ ಶೈಲಿಯ ಮುಂದುವರಿಕೆಯನ್ನು ಕಾಣಬಹುದು. ದೇವಾಲಯದ ನಿರ್ಮಾಣದ ರೂವಾರಿಗಳಾದ ಮಲ್ಲಿತಮ್ಮ ಮತ್ತು ಬೈಚೋಜರು ಇಲ್ಲಿಯ ಕಲಾಕೃತಿಗಳ ನಿರ್ಮಾಪಕರಲ್ಲಿ ಪ್ರಮುಖರಾಗಿದ್ದಾರೆ. ಇಲ್ಲಿ ಧಾರ್ಮಿಕ ವಿಚಾರಗಳ ಜೊತೆಗೆ ಸಾಂಸ್ಕೃತಿಕ ಸಂಗತಿಗಳನ್ನು ತಿಳಿಯಪಡಿಸುತ್ತವೆ. ಸದಾಶಿವ ದೇವಾಲಯವು ಸಹ ಹೊಯ್ಸಳ ವಾಸ್ತುಶೈಲಿಯಲ್ಲಿ ವಿಶಿಷ್ಠ ಸ್ಥಾನವನ್ನು ಪಡೆದಿದೆ. ಇದು ನಕ್ಷತ್ರ ಮತ್ತು ಚತುರಸ್ರ ವಿನ್ಯಾಸಗಳ ಮಿಶ್ರಣವನ್ನು ಹೊಂದಿದೆ. ಇದು ಸಹ ಸೋಮೇಶ್ವರನ ಕಾಲದಲ್ಲಿ ನಿರ್ಮಾಣವಾಗಿದೆ. ಇದರ ಶಿಖರವು ನಾಗರ ವಾಸ್ತುಶೈಲಿಯನ್ನು ಹೊಂದಿದೆ, ಇದು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದ ಔತ್ತರೇಯ ಶಿಖರವನ್ನು ಹೊಂದಿರುವಂತಾಗಿದೆ. ಹೊಯ್ಸಳರ ಕಾಲದಲ್ಲಿ ಔತ್ತರೇಯ ವಾಸ್ತುಲಕ್ಷಣಗಳು ಇದ್ದ ಬಗ್ಗೆ ಹೇಳಲು ಇದೊಂದು ಉತ್ತಮ ಉದಾಹರಣೆಯ ದೇವಾಲಯವಾಗಿದೆ. ಚಂದ್ರಮೌಳೇಶ್ವರ ದೇವಾಲಯವು ಸಹ ಸೋಪುಗಲ್ಲಿನಿಂದ ನಿರ್ಮಾಣವಾದರೂ ಇದು ಬಹಳ ಶಿಥಿಲವಾಗಿದೆ. ಇಲ್ಲಿ ಯಾವುದೇ ಶಿಲ್ಪಗಳಿಲ್ಲದಿದ್ದರೂ ಸಹ ಇವೆರಡೂ ದೇವಾಲಯಕ್ಕಿಂತ ಪೂರ್ವದಲ್ಲಿಯೇ ನಿರ್ಮಾಣವಾಗಿರುವ ದೇವಾಲಯವಾಗಿದೆ.

## ಅಧ್ಯಯನದ ಉದ್ದೇಶ

ಈ ಸಂಶೋಧನೆಯ ಮುಖ್ಯ ಉದ್ದೇಶವೆಂದರೆ ಈ ಎರಡೂ ಗ್ರಾಮಗಳಲ್ಲಿ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳ ವಿವರವಾದ ವಾಸ್ತು ಮತ್ತು ಶಿಲ್ಪ ಕಲೆಯ ಅಧ್ಯಯನದ ಜೊತೆಗೆ ದೇವಾಲಯಗಳ ತುಲಾನಾತ್ಮಕವಾದ ಅಧ್ಯಯನವು ಇಲ್ಲಿ ಅವಶ್ಯಕವಾಗಿರುತ್ತದೆ. ಹೊಯ್ಸಳರ ಕಾಲದಲ್ಲಿ ಹಲವಾರು ದೇವಾಲಯಗಳು ವಾಸ್ತುಶೈಲಿಯಲ್ಲಿ

ಬಹಳ ಅಲಂಕಾರಿಕವಾಗಿ ನಿರ್ಮಾಣವಾದವು. ಅವುಗಳು ಜಗತಿ, ಅಲಂಕರಣೆಯ ಅಧಿಷ್ಠಾನ, ಭಿತ್ತಿಶಿಲ್ಪಗಳು, ಶಿಖರಗಳು, ಅಲಂಕಾರಿಕ ಕಂಭಗಳು, ಭುವನೇಶ್ವರಿಗಳು ಹಾಗೂ ಬಿಡಿ ಶಿಲ್ಪಗಳನ್ನು ಹೊಂದುತ್ತಾ ಕಲೆಯ ಶ್ರೀಮಂತಿಕೆಯನ್ನು ಒಳಗೊಂಡಿರುವಂತಾಗಿವೆ. ಅಂತಹವುಗಳ ಪಟ್ಟಿಯಲ್ಲಿ ಕಿಕ್ಕೇರಿ ಹಾಗೂ ನುಗ್ಗೇಹಳ್ಳಿಯಲ್ಲಿರುವ ದೇವಾಲಯಗಳು ಸಹ ಸ್ವಲ್ಪ ವಿಭಿನ್ನ ಲಕ್ಷಣಗಳನ್ನೊಳಗೊಂಡು ಆ ಸಾಲಿಗೆ ಸೇರುತ್ತವೆ. ಈ ದೇವಾಲಯಗಳ ಸಮಕಾಲೀನದಲ್ಲಿ ನಿರ್ಮಾಣವಾದ ದೇವಾಲಯಗಳನ್ನು ಮತ್ತು ಇವುಗಳ ಪೂರ್ವಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳನ್ನು ಅವಶ್ಯಕವೆನಿಸಿದ ಭಾಗದಲ್ಲಿಯೆ ಉಲ್ಲೇಖಿಸುತ್ತಾ ನನ್ನ ಕಾರ್ಯ ವ್ಯಾಪ್ತಿಗೆ ಬರುವ ದೇವಾಲಯಗಳ ವಾಸ್ತುಶೈಲಿಯ ವಿವರಣೆಯನ್ನು ಈ ಸಂಶೋಧನೆಯಲ್ಲಿ ನೀಡುವುದೇ ನಮ್ಮ ಉದ್ದೇಶವಾಗಿದೆ.

ಈ ಅಧ್ಯಯನಕ್ಕೆ ಪ್ರಕಟವಾದ ಶಾಸನಗಳು, ವರದಿಗಳು ಹಾಗೂ ಇನ್ನಿತರ ಗ್ರಂಥಗಳಲ್ಲಿ ದೊರಕುವ ಮಾಹಿತಿಯನ್ನು ಸಂಗ್ರಹ ಮಾಡಿದ್ದೇನೆ. ಸಂಶೋಧನಾ ಕಾರ್ಯ ವ್ಯಾಪ್ತಿಗೆ ಬರುವ ದೇವಾಲಯಗಳಿಗೆ ಭೇಟಿ ನೀಡಿ ಅವುಗಳ ಛಾಯಾಚಿತ್ರಗಳನ್ನು ಮಾಡಿಕೊಂಡು ಅಲ್ಲಿನ ವಾಸ್ತು ಮತ್ತು ಶಿಲ್ಪಗಳ ವಿವರಣೆಯನ್ನು ದಾಖಲಿಸಿಕೊಂಡು ಎಲ್ಲ ದೇವಾಲಯಗಳ ಮಾಹಿತಿಯನ್ನು ಸಮರ್ಪಕವಾಗಿ ನೀಡಿದ್ದೇನೆ. ಹಾಗೂ ಶಿಲ್ಪಶಾಸ್ತ್ರಜ್ಞರನ್ನು ಭೇಟಿ ಮಾಡಿ ಹಲವು ಶಿಲ್ಪಗಳ ಮಾಹಿತಿಗಳನ್ನು ಪಡೆದುಕೊಂಡು ಅವುಗಳ ಲಕ್ಷಣಗಳ ಸಂಪೂರ್ಣ ಮಾಹಿತಿಯನ್ನು ನೀಡಿದ್ದೇನೆ.

## ಅಧ್ಯಯನದ ವ್ಯಾಪ್ತಿ

ಮಂಡ್ಯ ಮತ್ತು ಹಾಸನ ಜಿಲ್ಲೆಗಳು ಕರ್ನಾಟಕದ ಜಿಲ್ಲೆಗಳಲ್ಲಿ ಪ್ರಮುಖವಾದುದಾಗಿವೆ. ಇವುಗಳು ಕರ್ನಾಟಕದ ದಕ್ಷಿಣ ಭಾಗದಲ್ಲಿರುವ ಜಿಲ್ಲಾ ಕೇಂದ್ರಗಳಾಗಿದ್ದು ಬಯಲು ಪ್ರದೇಶಗಳನ್ನು ಹೊಂದಿದವುಗಳಾಗಿವೆ. ಇವುಗಳು ಐತಿಹಾಸಿಕವಾಗಿಯೂ ಹಾಗೂ ಸಾಂಸ್ಕೃತಿಕವಾಗಿಯೂ ಬಹಳ ಶ್ರೀಮಂತಿಕೆಯನ್ನು ಹೊಂದಿವೆ. ಕರ್ನಾಟಕವನ್ನಾಳಿದ ಹಲವು ರಾಜಮನೆತನಗಳ ಆಳ್ವಿಕೆಗೆ ಈ ಪ್ರದೇಶವು ಒಳಪಟ್ಟಿದ್ದವು. ಗಂಗರಸರಿಂದ ಪ್ರಾರಂಭವಾಗುವ ಆಳ್ವಿಕೆ ಅದಕ್ಕೂ ಹಿಂದೆ ಅಥವಾ ಅದೇ ಕಾಲದಲ್ಲಿ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಪಲ್ಲವರ ಛಾಯೆಯು ಇದ್ದು ನಂತರದಲ್ಲಿ ಚೋಳರ ಸ್ವಾಧೀನವಾಗಿ, ಹೊಯ್ಸಳ ಪ್ರಭಾವವು ವಿರಳವಾಗಿ ವ್ಯಾಪಿಸಿ, ವಿಜಯನಗರ ಅರಸರ ತಾಣವಾಗಿ, ಪಾಳೆಗಾರರ ನೆಲೆಗಳಾಗಿ, ಮೈಸೂರು ಅರಸರ ದಳವಾಯಿಗಳ ರಾಜ್ಯಭಾರ ನಡೆದು, ಹೈದರ್ ಮತ್ತು ಟಿಪ್ಪು ಅವರ ಕೈಸೇರಿ, ಅವರ ಮರಣಾನಂತರ ಆಧುನಿಕ ಕಾಲಕ್ಕೆ ಬಂದಿತು. ನಂತರ ಬ್ರಿಟಿಷರ ದರಬಾರಿನೊಂದಿಗೆ ಮೈಸೂರು ಅರಸರ ಪುನರ್ ಆಳ್ವಿಕೆಯೂ ಮುಗಿದು ಸ್ವತಂತ್ರ

ಭಾರತದ ಪ್ರಜಾತಂತ್ರದಲ್ಲಿ ವಿಲೀನಗೊಂಡಿತು. ಅದರ ಕುರುಹುಗಳಾಗಿ ಶಾಸನಗಳು, ನಾಣ್ಯಗಳು, ಕೆರೆಗಳು, ಪುಷ್ಕರಣಿಗಳು ಹಾಗೂ ದೇವಾಲಯಗಳು ಹಾಗೂ ಇನ್ನಿತರ ಐತಿಹಾಸಿಕ ದಾಖಲೆಗಳು ದೊರೆಯುತ್ತಿರುವುದೆ ಸಾಕ್ಷಿಯಾಗಿವೆ.

ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲ್ಲೋಕಿನ ಕಿಕ್ಕೇರಿ ಹಾಗೂ ಹಾಸನ ಜಿಲ್ಲೆಯ ಚೆನ್ನರಾಯ ಪಟ್ಟಣ ತಾಲ್ಲೋಕಿನ ನುಗ್ಗೇಹಳ್ಳಿಯು ನನ್ನ ಸಂಶೋಧನಾ ಕಾರ್ಯ ಕ್ಷೇತ್ರವನ್ನಾಗಿ ಆಯ್ಕೆ ಮಾಡಿಕೊಂಡಿದ್ದೇನೆ. ಈ ಎರಡು ಗ್ರಾಮಗಳಲ್ಲಿ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪಗಳ ವಿಮರ್ಶಾತ್ಮಕವಾದ ಅಧ್ಯಯನವನ್ನು ನಡೆಸಿ ಅದರ ಮಾಹಿತಿಯನ್ನು ಆಯಾ ಅಧ್ಯಾಯಗಳಲ್ಲಿ ನೀಡಿದ್ದೇನೆ. ಹೊಯ್ಸಳರ ಕಾಲಕ್ಕಿಂತ ಪೂರ್ವದಲ್ಲಿ ಹಾಗೂ ನಂತರದ ಕಾಲದಲ್ಲಿಯ ದೇವಾಲಯಗಳು ಇಲ್ಲಿ ದೊರೆಯುವುದು ಬಹಳ ವಿರಳ. ಅವುಗಳು ದೊರೆತರೂ ಸಹ ವಾಸ್ತುಶೈಲಿಯ ದೃಷ್ಠಿಯಲ್ಲಿ ಅಷ್ಟೇನು ಮಹತ್ವವಾಗಿಲ್ಲದಿರುವುದರಿಂದ ನನ್ನ ಸಂಶೋಧನೆಯ ಕಾರ್ಯ ಕ್ಷೇತ್ರವನ್ನು ಕೇವಲ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳಿಗೆ ಮಾತ್ರ ಸೀಮಿತಗೊಳಿಸಿಕೊಂಡಿದ್ದೇನೆ.

**ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳ ಅವಲೋಕನ**

ಕರ್ನಾಟಕದಲ್ಲಿ ಹೊಯ್ಸಳರ ಇತಿಹಾಸ, ಶಾಸನ, ಸಾಹಿತ್ಯ, ವಾಸ್ತುಕಲೆ ಮತ್ತು ಶಿಲ್ಪಕಲೆಗಳನ್ನು ಕುರಿತಂತೆ ಕಳೆದ ಶತಮಾನದಿಂದಲೂ ಹಲವಾರು ಅಧ್ಯಯನಗಳು ಆಗಿವೆ. ಅವುಗಳಲ್ಲಿ ಅಧ್ಯಯನದ ಸಾರವನ್ನು ಪುಸ್ತಕ ಮತ್ತು ಲೇಖನಗಳ ರೂಪದಲ್ಲಿ ಪ್ರಕಟಿಸಲಾಗಿದೆ. ದೇವಾಲಯಗಳಿಗಿಂತ ಮೊದಲು ಹೆಚ್ಚು ಗಮನ ಸೆಳೆದ ವಿಷಯವೆಂದರೆ ಶಾಸನಗಳು. ಬಿ.ಎಲ್.ರೈಸ್. ಆರ್. ನರಸಿಂಹಚಾರ್. ಶ್ಯಾಮಶಾಸ್ತ್ರಿ, ಆರ್. ಎಂ.ಎಚ್.ಕೃಷ್ಣ ಹೀಗೆ ಹಲವಾರು ವಿದ್ವಾಂಸರುಗಳು ಆ ಕಾಲದಲ್ಲಿಯೇ ಶಾಸನಗಳನ್ನು ಸಂಗ್ರಹಿಸಿ ಓದಿ, ವಿಶ್ಲೇಷಿಸಿ ಅವುಗಳಲ್ಲಿರುವ ಐತಿಹಾಸಿಕ ಚಾರಿತ್ರಿಕ, ಧಾರ್ಮಿಕ ವಿಷಯಗಳ ಬಗ್ಗೆ ಬೆಳಕನ್ನು ಚೆಲ್ಲಿದ್ದಾರೆ. ಇವುಗಳು ಎಫಿಗ್ರಾಫಿಯಾ ಕರ್ನಾಟಿಕ ಎಂಬ ಸಂಪುಟಗಳಲ್ಲಿ ಪ್ರಕಟಗೊಂಡಿವೆ. ಅಲ್ಲದೆ ಸೌತ್ ಇಂಡಿಯನ್ ಇನ್ಸ್‌ಕ್ರಿಪಷನ್ಸ್ ಗ್ರಂಥಗಳಲ್ಲಿಯು ಸಹ ಹಲವಾರು ಶಾಸನಗಳು ಬೆಳಕಿಗೆ ಬಂದಿವೆ. ನರಸಿಂಹಚಾರ್ ಆರ್. ಎಂ.ಎ.ಆರ್ ಗಳಲ್ಲಿ ಹೊಯ್ಸಳ ದೇವಾಲಯಗಳನ್ನು ಕುರಿತು ಬರೆದವರಲ್ಲಿ ಮೊದಲಿಗರು. ಕೃಷ್ಣ, ಎಂ.ಎಚ್. ಅವರೂ ಸಹ ನರಸಿಂಹಚಾರ್ ನಂತರ, ಹೊಯ್ಸಳ ದೇವಾಲಯಗಳನ್ನು ಕುರಿತು ಬರೆದವರಲ್ಲಿ ಪ್ರಮುಖರಾಗಿದ್ದಾರೆ.

ಬೆಂಗಳೂರಿನ ಮಿಥಿಕ್ ಸೊಸೈಟಿಯ ತ್ರೈಮಾಸಿಕ ಪತ್ರಿಕೆಗಳಲ್ಲಿ (Q.J.M.S) ಹಲವಾರು ಲೇಖನಗಳು ಪ್ರಕಟಗೊಂಡಿವೆ. ಎ.ಎನ್. ಕೃಷ್ಣಯ್ಯಂಗಾರ್ ಬಿ.ಎನ್. ಜೋಷಿ ಮುಂತಾದವರು ಹಲವಾರು ಲೇಖನಗಳನ್ನು ಶ್ರೀವೈಷ್ಣವಧರ್ಮ, ಹೊಯ್ಸಳ ರಾಜಮನೆತನದ ಹಲವಾರು ವಿಷಯಗಳನ್ನು ಕುರಿತಂತೆ ಬಿಡಿಲೇಖನಗಳಲ್ಲಿ ಹಲವು ದೇವಾಲಯಗಳ ಶಿಲ್ಪ ಮತ್ತು ಶಾಸನಗಳ ಬಗ್ಗೆ ವಿವರಣೆಯನ್ನು ನೀಡುತ್ತವೆ.

ವಾಸ್ತು ಮತ್ತು ಶಿಲ್ಪಗಳನ್ನು ಕುರಿತಂತೆ ಅಪಾರವಾದ ವಿಷಯಗಳನ್ನು ಗ್ರಹಿಸಲು ಶುಲ್ಬಸೂತ್ರಗಳು, ಅಗಮಗಳು, ಮಯಮತ, ಮಾನಸಾರ ಇತ್ಯಾದಿ ವಾಸ್ತುಶಿಲ್ಪ ಕುರಿತ ಪ್ರಾಚೀನ ಗ್ರಂಥಗಳೇ ಅಲ್ಲದೇ ಕ್ರಿ.ಶ. 19ನೇಯ ಶತಮಾನದ ಮಧ್ಯಕಾಲದಿಂದಲೂ ದೇವಾಲಯಗಳನ್ನು ಕುರಿತ ಅಧ್ಯಯನ ಮತ್ತು ಅದಕ್ಕೆ ಪೂರಕವಾದ ಗ್ರಂಥಗಳು ದೇವಾಲಯಗಳ ಅಧ್ಯಯನಕ್ಕೆ ಗಮನ ಸೆಳೆದಿದೆ.

ಹೊಯ್ಸಳ ವಾಸ್ತುಶಿಲ್ಪವನ್ನೆ ವಿಶೇಷವಾಗಿ ಪರೀಶೀಲಿಸಿರುವ ಗ್ರಂಥವೆಂದರೆ[4] ಡಾ.ಎಸ್. ಶ್ರೀಕಂಠಶಾಸ್ತ್ರಿ ಅವರ 'ಹೊಯ್ಸಳ ವಾಸ್ತುಶಿಲ್ಪ', ಇದು ಹೊಯ್ಸಳ ಶೈಲಿಯ ದೊಡ್ಡ ಮತ್ತು ಸಣ್ಣ ದೇವಾಲಯಗಳನ್ನು ಕುರಿತ ಒಂದು ಉತ್ತಮ ಮಾರ್ಗದರ್ಶಕ ಕೃತಿಯಾಗಿದೆ.

ಕೆ.ಇಸ್ಮಾಯಿಲ್‌ರವರ[5] 'ಕರ್ನಾಟಕ ಟೆಂಪಲ್ಸ್' ಎಂಬ ಗ್ರಂಥವು ಎಂಟು ಅಧ್ಯಾಯಗಳನ್ನು ಒಳಗೊಂಡಿರುವ ಈ ಗ್ರಂಥವು ಸಾಮಾಜಿಕ ಹಾಗೂ ಆರ್ಥಿಕ ಕೊಡುಗೆಗಳಲ್ಲಿ ದೇವಾಲಯಗಳ ಪಾತ್ರವೇನು ಎಂಬುದನ್ನು ತಿಳಿಸುತ್ತದೆ. ಗ್ರಂಥವು ಹೆಚ್ಚಿನ ಸಂಖ್ಯೆಯಲ್ಲಿ ಶಾಸನಗಳ ಆಧಾರದ ಮೇಲೆ ವಿವರಿಸುತ್ತದೆ, ದೇವಾಲಯಕ್ಕೆ ಕೊಟ್ಟಂತಹ ದಾನ ಧರ್ಮಗಳು ಹಾಗೂ ಅವುಗಳು ಮಾನವನ ದಿನ ನಿತ್ಯ ಕಾರ್ಯಗಳಲ್ಲಿ ಅವುಗಳ ಕಾರ್ಯ ವ್ಯಾಪ್ತಿಯನ್ನು ತಿಳಿಸುವಂತಹ ಸಂಶೋಧನಾ ಗ್ರಂಥವಾಗಿದೆ.

ಡಾ.ಟಿ.ವಿ ಮಹಾಲಿಂಗಮ್‌ರವರ[6] 'ದಿ ಸೌತ್ ಇಂಡಿಯನ್ ಟೆಂಪಲ್ ಕಾಂಪ್ಲೆಕ್ಸ್', ಎಂಬ ಗ್ರಂಥವು ಅವರು ನೀಡಿರುವ ಉಪನ್ಯಾಸ ಮಾಲೆಯ ಗ್ರಂಥವಾಗಿದೆ. ಕೆ.ಪದ್ಮನಾಭರವರ 'ಹೊಯ್ಸಳ ಸ್ಕಲ್ಪಚರ್ಸ್ ಎ ಕಲ್ಚರಲ್ ಸ್ಟಡಿ' ಎಂಬ ಗ್ರಂಥದಲ್ಲಿ ಹೊಯ್ಸಳರ ಕಾಲದ ಲಕ್ಷಣಗಳು ಮತ್ತು ವಿಧಗಳ ಬಗೆಗೆ ಮಾಹಿತಿಯನ್ನು ಒದಗಿಸುತ್ತದೆ. ಈ ಗ್ರಂಥದಲ್ಲಿ ಹೊಯ್ಸಳರ ಕಾಲದ ಶಿಲ್ಪಗಳ ಆಧಾರದ ಮೇಲೆ ಅಂದಿನ ಜನರು ಬಳಸುತ್ತಿದ್ದಂತಹ ಉಡುಪುಗಳು, ಪೀಠೋಪಕರಣಗಳು, ಕಿರೀಟಗಳು, ಪಾತ್ರೆಗಳು, ಸಂಗೀತ ಸಾಧನಗಳು, ಆಯುಧಗಳು ಹಾಗೂ ಇನ್ನಿತರ ವಸ್ತುಗಳ ಬಗ್ಗೆ ವಿವರವಾಗಿ ತಿಳಿಸಲಾಗಿದೆ.

ಡಾ.ಕೆ.ಎಂ. ಸುರೇಶರವರ[7] 'ಟೆಂಪಲ್ಸ್ ಆಫ್ ಕರ್ನಾಟಕ' ಗ್ರಂಥವು ಎರಡು ಸಂಪುಟಗಳನ್ನೊಳಗೊಂಡಿದ್ದು ಮೊದಲನೆ ಸಂಪುಟದಲ್ಲಿ ಹಲವಾರು ದೇವಾಲಯಗಳ ವಾಸ್ತುಶೈಲಿಯ ಲಕ್ಷಣಗಳನ್ನು ತಿಳಿಸಲಾಗಿದೆ. ಏಕಕೂಟದೇವಾಲಯದಿಂದ ಆರಂಭಗೊಂಡು ನವಕೂಟ ದೇವಾಲಯದವರೆಗೆ ಅವುಗಳ ವಿವರಣೆಯನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ. ಶ್ರೀ.ಪಿ.ಕೆ. ಆಚಾರ್ಯರವರ[8] 'ಇಂಡಿಯನ್ ಅರ್ಕಿಟೆಕ್ಚರ್' ಗ್ರಂಥದಲ್ಲಿ ವಾಸ್ತುಶೈಲಿ ಮತ್ತು ಶಿಲ್ಪ ಲಕ್ಷಣಗಳನ್ನು ವಿವರಿಸುವ ಪ್ರಾಚೀನ ಸಾಹಿತ್ಯಗಳು ಹಾಗೂ ಪ್ರಾಚೀನ ಪುಸ್ತಕಗಳ ಬಗ್ಗೆ ವಿಶ್ಲೇಷಿಸಿದ್ದಾರೆ ಹಾಗೂ ವಾಸ್ತುಶೈಲಿ ಮತ್ತು ಶಿಲ್ಪ ಲಕ್ಷಣಗಳನ್ನು ಕುರಿತು ಪ್ರಾಚೀನ ಗ್ರಂಥಗಳಲ್ಲಿ ಉಲ್ಲೇಖವಿರುವ ವಸ್ತು ವಿಷಯವನ್ನು ತಿಳಿಸುತ್ತದೆ. ಮುಖ್ಯವಾಗಿ ಮಾನಸಾರ, ಮಯಮತ, ಪುರಾಣ, ಆಗಮ, ವೈದಿಕ ಸಾಹಿತ್ಯ, ಬೌದ್ಧ ಸಾಹಿತ್ಯ ಮುಂತಾದವುಗಳ ಮೂಲ ಆಧಾರದಲ್ಲಿ ವಿವರಣೆಯನ್ನು ನೀಡಿದ್ದಾರೆ. ಇದು ವಾಸ್ತುಶೈಲಿ ಮತ್ತು ಶಿಲ್ಪಗಳ ಅಧ್ಯಯನಕ್ಕೆ ಮೂಲ ಗ್ರಂಥವಾಗಿದೆ ಎಂದರೆ ತಪ್ಪಾಗಲಾರದು. ಇವರ ಮತ್ತೊಂದು ಗ್ರಂಥವಾದ 'ಎ ಡಿಕ್ಷನರಿ ಅಫ್ ಹಿಂದೂ ಆರ್ಕಿಟೆಕ್ಚರ್' ಎಂಬ ಗ್ರಂಥದಲ್ಲಿ ದೇವಾಲಯಗಳ ಪ್ರತಿಯೊಂದು ಭಾಗಗಳ ವಿವರಣೆಯನ್ನು ನೀಡಲಾಗಿದೆ. ಎಸ್. ಕೆ. ಮೇಟಿಯವರು[9] 'ಮಾಸ್ಟರ್ ಪಿಸಸ್ ಆಫ್ ಹೊಯ್ಸಳ ಆರ್ಟ್ ಬೇಲೂರು, ಹಳೇಬೀಡು, ಸೋಮನಾಥಪುರ' ಈ ಗ್ರಂಥವು ಸಹ ಹೊಯ್ಸಳರ ಆಯ್ದ ದೇವಾಲಯಗಳ ಮೇಲೆ ಬೆಳಕು ಚೆಲ್ಲುತ್ತದೆ.

ಡಾ|| ಎನ್. ಎಸ್. ರಂಗರಾಜುರವರ[10] 'ಹೊಯ್ಸಳ ಟೆಂಪಲ್ ಇನ್ ಮಂಡ್ಯ ಅಂಡ್ ತುಮಕೂರು ಡಿಸ್ಟ್ರಿಕ್ಟ್' ಪಿ.ಎಚ್‌ಡಿ ಪ್ರೌಢ ಪ್ರಬಂಧದಲ್ಲಿ ಮಂಡ್ಯ ಮತ್ತು ತುಮಕೂರು ಜಿಲ್ಲೆಯ ಹೊಯ್ಸಳ ದೇವಾಲಯಗಳ ವಾಸ್ತು ಮತ್ತು ಶಿಲ್ಪ ಕಲೆಗಳ ವಿವರಣೆಯನ್ನು ನೀಡಿದ್ದಾರೆ. ಈ ಗ್ರಂಥದಲ್ಲಿ ಕಿಕ್ಕೇರಿಯ ದೇವಾಲಯಗಳ ವಾಸ್ತು ಶೈಲಿಯನ್ನು ಉಲ್ಲೇಖಿಸಿದ್ದಾರೆ. ಶಿಲ್ಪಗಳ ಲಕ್ಷಣಗಳನ್ನು ಕುರಿತಂತೆ ಟಿ.ಎ. ಗೋಪಿನಾಥ್‌ರವರ[11] 'ದಿ ಎಲಿಮೆಂಟ್ಸ್ ಆಪ್ ಹಿಂದು ಐಕಾನೋಗ್ರಫಿ' ಕೃತಿಗಳಲ್ಲಿ ಹಲವಾರು ಶಿಲ್ಪಗಳು ಉಲ್ಲೇಖಿಸಲ್ಪಟ್ಟಿವೆ.

ಪರ್ಸಿ ಬ್ರೌನ್‌ರವರ[12] 'ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್'. ಎಂ.ಎ. ಡಾಖೆರವರು[13] ಮತ್ತು ಮೈಕಲ್ ಮೈಸ್ಟರ್‌ರವರು ಸಂಪಾದಿಸಿದ 'ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್ ಸೌತ್ ಇಂಡಿಯಾ', 'ಲೊಯರ್ ದ್ರಾವಿಡದೇಶ್' ಇವುಗಳು ಶಾಸನಗಳ ಮೂಲದಿಂದ ಕರ್ನಾಟಕದ ವಾಸ್ತುಕಲೆಯ ವಿವರಣೆಯನ್ನು ನೀಡುವ ಗ್ರಂಥಗಳಾಗಿವೆ. ಗೆರಾರ್ಡ್ ಪೊಕೇಮಾರವರ[14] ಗ್ರಂಥವಾದ

'ಹೊಯ್ಸಳ ಟೆಂಪಲ್ಸ್' ಎಂಬ ಗ್ರಂಥದಲ್ಲಿಯೂ ಸಹ ಹೊಯ್ಸಳ ದೇವಾಲಯಗಳ ವಾಸ್ತುಶಿಲ್ಪಗಳನ್ನು ತಿಳಿಸುವುದಾಗಿದೆ.

ಹೊಯ್ಸಳ ಇತಿಹಾಸದ ಬಗ್ಗೆ ಹಲವಾರು ಗ್ರಂಥಗಳು ಪ್ರಕಟವಾಗಿವೆ. ಇವುಗಳಲ್ಲಿ ವಿಲಿಯಂ ಕೊಹಿಲೋರ[15] 'ದಿ ಹೊಯ್ಸಳ ವಂಶ' ಮತ್ತು ಜೆ.ಡಿ.ಎಂ. ಡೇರೆಟ್‌ರವರ[16] 'ದಿ ಹೊಯ್ಸಳಾಸ್' ಬಿ.ಷೇಕ್‌ಅಲಿ[17] ಅವರು ಹೊಯ್ಸಳರನ್ನೇ ಕುರಿತು ವಿವಿಧ ಲೇಖನಗಳ ಸಂಗ್ರಹವನ್ನು ಸಂಪಾದಿಸಿರುವ 'ದಿ ಹೊಯ್ಸಳ ಡೈನಾಸ್ಟಿ' ಎಂಬ ಕೃತಿಗಳು ಬಹಳ ಪ್ರಮುಖವಾದವುಗಳು. ಹೊಯ್ಸಳರ ಕಾಲದ ಶಿಲ್ಪಿಗಳನ್ನೇ ಕುರಿತಂತೆ ಸಾಕಷ್ಟು ಸಂಶೋಧನೆಗಳು ಸಹ ಆಗಿವೆ. ಇವುಗಳಲ್ಲಿ ಕೆಲೇಸನ್ ಕೊಲಿಯರ್[18] ಅವರ 'ದಿ ಹೊಯ್ಸಳ ಆರ್ಟಿಸ್ಟ್, ದೇರ್ ಐಡೆಂಟಿಟಿ ಅಂಡ್ ಸ್ಟೈಲ್' ಎಂಬ ಗ್ರಂಥದಲ್ಲಿ ಶಿಲ್ಪಿಗಳ ಹೆಸರು, ಬಿರುದು ಅವರ ಸಾಮಾಜಿಕ ಮತ್ತು ರಾಜಕೀಯ ಜೀವನಗಳನ್ನು ಕುರಿತು ಚರ್ಚಿಸಲಾಗಿರುತ್ತದೆ.

ಈ ರೀತಿಯಲ್ಲಿ ಹೊಯ್ಸಳರ ಕಾಲದ ಇತಿಹಾಸ ಅವರು ನಿರ್ಮಾಣ ಮಾಡಿದ ದೇವಾಲಯಗಳ ವಾಸ್ತು ಶಿಲ್ಪ, ಶಾಸನ ಹಾಗೂ ಸಾಂಸ್ಕೃತಿಕ ಅಧ್ಯಯನಗಳು ಹಲವಾರು ಸಂಖ್ಯೆಯಲ್ಲಿ ಆಗಿವೆ. ಈ ದಿಸೆಯಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದ ಪಿ.ಹೆಚ್.ಡಿ ಸಂಶೋಧನಾ ಗ್ರಂಥಗಳು ಹಲವಾರು ಹೊಸ ಹೊಸ ವಿಷಯಗಳ ಮೇಲೆ ಬೆಳಕನ್ನು ಚೆಲ್ಲುತ್ತವೆ. ಡಾ. ಟಿ. ದಯಾನಂದ ಪಟೇಲ್[19] ಅವರ 'ದ ಕೇಶವ ಟೆಂಪಲ್ಸ್ ಅಟ್ ಸೋಮನಾಥಪುರ' ಗ್ರಂಥವು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದ ಸೋಮನಾಥಪುರದ ದೇವಾಲಯದ ಶಿಲ್ಪ ಮತ್ತು ವಾಸ್ತುವಿನ ಮೇಲೆ ಬೆಳಕು ಚೆಲ್ಲಿದೆ. ಡಾ. ರಾಧ ಪಟೇಲ್‌ರ[20] 'ಲೈಫ್ ಅಂಡ್ ಟೈಮ್ಸ್ ಆಫ್ ಹೊಯ್ಸಳ ನರಸಿಂಹ III' ಎಂಬ ಗ್ರಂಥ. ಡಿ.ವಿ. ದೇವರಾಜ್‌ರವರ[21] 'ಹಿಸ್ಟ್ರಿ ಆಫ್ ದಿ ಸೋಮನಾಥಪುರ ಟೆಂಪಲ್ ಕಾಂಪ್ಲೆಕ್ಸ್' ಮುಂತಾದ ಇನ್ನೂ ಹತ್ತು ಹಲವಾರು ಗ್ರಂಥಗಳು ಹಾಗೂ ಬಿಡಿ ಲೇಖನಗಳು ನಾವು ಕೈಗೊಂಡಿರುವ ಹೊಯ್ಸಳ ದೇವಾಲಯಗಳ ಅಧ್ಯಯನದ ಪ್ರಯತ್ನಕ್ಕೆ ಬೆನ್ನೆಲುಬಾಗಿವೆ ಎಂದರೆ ತಪ್ಪಾಗಲಾರದು.

ಈ ಮೇಲೆ ತಿಳಿಸಿದ ಲೇಖಕರುಗಳಲ್ಲದೆ ಇನ್ನು ಹಲವಾರು ಜನ ವಿದ್ವಾಂಸರುಗಳು ಹೊಯ್ಸಳ ದೇವಾಲಯಗಳ ಕಲೆ ಮತು ವಾಸ್ತುಶಿಲ್ಪಗಳನ್ನು ಕುರಿತಾದಂತೆ ಸಂಬಂಧ ಪಡುವಂತಹ ಲೇಖನಗಳನ್ನು ಆಗಾಗ ಪ್ರಕಟಿಸಿದ್ದಾರೆ. ಇವುಗಳಲ್ಲಿ 'ಇತಿಹಾಸ ದರ್ಶನ', 'ಸ್ಟಡೀಸ್ ಇನ್ ಕರ್ನಾಟಕ ಹಿಸ್ಟರಿ ಅಂಡ್ ಕಲ್ಚರ್' 'ಮೈಸೂರು ಆರ್ಕಿಯಾಲಜಿಕಲ್ ರೀಪೋರ್ಟ್' ಮುಂತಾದ ಗ್ರಂಥಗಳಲ್ಲಿ ಇರುವ ಹಲವಾರು ಸಂಶೋಧನಾ ಲೇಖನಗಳು ನನ್ನ ಅಧ್ಯಯನ ಕ್ಷೇತ್ರಕ್ಕೆ

ಉಪಯುಕ್ತವಾಗಿವೆ. ಇವುಗಳನ್ನು ಅಧ್ಯಯನ ಮಾಡಿ ದೇವಾಲಯಗಳಿರುವ ಸ್ಥಳಕ್ಕೆ ಭೇಟಿ ನೀಡಿ ದೇವಾಲಯಗಳ ವಾಸ್ತು ಶೈಲಿಯನ್ನು ಅಭ್ಯಾಸ ಮಾಡಿ. ಸ್ಥಳದಲ್ಲಿಯೇ ಶಿಲ್ಪಗಳ ಕುರಿತ ಟಿಪ್ಪಣಿಗಳನ್ನು ಮಾಡಿಕೊಂಡು ಈ ಗ್ರಂಥವನ್ನು ರಚಿಸಲು ಪ್ರಯತ್ನಿಸಲಾಗಿದೆ.

**ಆಕರ ಗ್ರಂಥಗಳು**


1. ಇಂಡಿಯನ್ ಆರ್ಕಿಟೆಕ್ಚರ್ – ಪರ್ಸಿ ಬ್ರೌನ್, ಪು.138
2. ಎಂ.ಎ.ಆರ್–1931, ಪು.20–21
3. ಎಂ.ಎ.ಆರ್–1931, ಪು.20–21
4. ಡಾ.ಎಸ್. ಶ್ರೀಕಂಠಶಾಸ್ತ್ರಿ – ಹೊಯ್ಸಳ ವಾಸ್ತುಶಿಲ್ಪ, 1965
5. ಕೆ.ಇಸ್ಮಾಯಿಲ್ – ಕರ್ನಾಟಕ ಟೆಂಪಲ್ಸ್, 1984
6. ಡಾ.ಟಿ.ವಿ ಮಹಾಲಿಂಗಮ್ – ದಿ ಸೌತ್ ಇಂಡಿಯನ್ ಟೆಂಪಲ್ ಕಾಂಪ್ಲೆಕ್ಸ್, 1970
7. ಡಾ.ಕೆ.ಎಂ. ಸುರೇಶ್ – ಟೆಂಪಲ್ಸ್ ಆಫ್ ಕರ್ನಾಟಕ, 2003
8. ಪಿ.ಕೆ. ಆಚಾರ್ಯ – ಇಂಡಿಯನ್ ಅರ್ಕಿಟೆಕ್ಚರ್ & ಎ ಡಿಕ್ಷನರಿ ಅಫ್ ಹಿಂದೂ ಅರ್ಕಿಟೆಕ್ಚರ್, 1927
9. ಎಸ್. ಕೆ. ಮೇಟಿ – ಮಾಸ್ಟರ್ ಪೀಸಸ್ ಆಫ್ ಹೊಯ್ಸಳ ಆರ್ಟ್ ಬೇಲೂರು, ಹಳೇಬೀಡು, ಸೋಮನಾಥಪುರ, 1997
10. ಡಾ॥ ಎನ್. ಎಸ್. ರಂಗರಾಜು – ಹೊಯ್ಸಳ ಟೆಂಪಲ್ಸ್ ಇನ್ ಮಂಡ್ಯ ಅಂಡ್ ತುಮಕೂರು ಡಿಸ್ಟ್ರಿಕ್ಟ್, 1998
11. ಟಿ.ಎ. ಗೋಪಿನಾಥ್ – ದಿ ಎಲಿಮೆಂಟ್ಸ್ ಆಪ್ ಹಿಂದು ಐಕಾನೋಗ್ರಫಿ, 1961
12. ಪರ್ಸಿ ಬ್ರೌನ್‌ರವರ – ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್, 1942
13. ಎಂ.ಎ.ಡಾಖೆ ಮತ್ತು ಮೈಕಲ್ ಮೈಸ್ಟರ್ – ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್ ಸೌತ್ ಇಂಡಿಯಾ ಮತ್ತು ಲೊಯರ್ ದ್ರಾವಿಡದೇಶ್ 1983, 1986
14. ಗೆರಾರ್ಡ್ ಪೊಕೇಮಾ –ಹೊಯ್ಸಳ ಟೆಂಪಲ್ಸ್, 1994
15. ವಿಲಿಯಂ ಕೊಹಿಲೋರ – ದಿ ಹೊಯ್ಸಳ ವಂಶ, 1996
16. ಜೆ.ಡಿ.ಎಂ. ಡೇರೆಟ್ – ದಿ ಹೊಯ್ಸಳಾಸ್, 1957
17. ಬಿ.ಷೇಕ್‌ಅಲಿ – ದಿ ಹೊಯ್ಸಳ ಡೈನಾಸ್ಟಿ, 1972

18. ಕೆಲೇಸನ್ ಕೊಲಿಯರ್ – ದಿ ಹೊಯ್ಸಳ ಆರ್ಟಿಸ್ಟಸ್ ದೇರ್ ಐಡೆಂಟಿಟಿ ಅಂಡ್ ಸ್ಟೈಲ್. 1989

19. ಡಾ. ಟಿ. ದಯಾನಂದ ಪಟೇಲ್ – ದ ಕೇಶವ ಟೆಂಪಲ್ಸ್ ಅಟ್ ಸೋಮನಾಥಪುರ. 1990

20.ಡಾ. ರಾಧ ಪಟೇಲ್ – ಲೈಫ್ ಅಂಡ್ ಟೈಮ್ಸ್ ಆಫ್ ಹೊಯ್ಸಳ ನರಸಿಂಹ III, 2001

21. ಡಿ.ವಿ. ದೇವರಾಜ – ಹಿಸ್ಟ್ರಿ ಆಪ್ ದಿ ಸೋಮನಾಥಪುರ ಟೆಂಪಲ್ ಕಾಂಪ್ಲೆಕ್ಸ್

# ಅಧ್ಯಾಯ – 2

## ರಾಜಕೀಯ ಇತಿಹಾಸ

ಕರ್ನಾಟಕದ ಇತಿಹಾಸದಲ್ಲಿ ಹೊಯ್ಸಳರ ಕಾಲದ ಆಡಳಿತವು ಮಹತ್ವದ ಸ್ಥಾನವನ್ನು ಹೊಂದಿದೆ. ಕ್ರಿ.ಶ.11ನೆಯ ಶತಮಾನದಿಂದ 14ನೆಯ ಶತಮಾನದವರೆಗೆ ಆಡಳಿತ ನಡೆಸಿದ ಪ್ರಮುಖ ಮನೆತನ. ಆರಂಭದಲ್ಲಿ ಕಲ್ಯಾಣದ ಚಾಲುಕ್ಯರ ಸಾಮಂತರಾಗಿ ಆಳ್ವಕೆ ಆರಂಭಿಸಿದ ಇವರು ಅವರ ಅವನತಿಯ ನಂತರದಲ್ಲಿ ಸ್ವತಂತ್ರರಾಗಿ ಕರ್ನಾಟಕದ ದಕ್ಷಿಣ ಭಾಗಗಳನ್ನು ಮತ್ತು ತಮಿಳುನಾಡಿನ ಕೆಲವು ಭಾಗಗಳನ್ನು ಆಳಿದರು.[1] ಹೊಯ್ಸಳ ವಂಶದಲ್ಲಿ ವಿಷ್ಣುವರ್ಧನ, ಇಮ್ಮಡಿ ಬಲ್ಲಾಳ ಮತ್ತು ಮುಮ್ಮಡಿ ಬಲ್ಲಾಳರಂತಹ ಸಮರ್ಥ ದೊರೆಗಳಿದ್ದರು. ಇವರ ಕಾಲದಲ್ಲಿ ಕರ್ನಾಟಕದ ಧಾರ್ಮಿಕ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಅತ್ಯಂತ ಮಹತ್ವಪೂರ್ಣ ಕಾಲವಾಗಿತ್ತು. ಇವರ ಕಾಲದಲ್ಲಿ ಜೈನಧರ್ಮ ಮತ್ತು ಶ್ರೀ ವೈಷ್ಣವ ಧರ್ಮಗಳು ಉಚ್ಛ್ರಾಯ ಸ್ಥಿತಿಯನ್ನು ತಲುಪಿದವು. ಕರ್ನಾಟಕದ ಮತ್ತು ಭಾರತೀಯ ವಾಸ್ತುಶಿಲ್ಪ ಮತ್ತು ಶಿಲ್ಪಕಲೆಯಲ್ಲಿ ಹೊಯ್ಸಳರ ಕಾಲ ಸ್ಮರಣೀಯ.

ಹೊಯ್ಸಳರು ಸ್ವತಂತ್ರ ರಾಜರಾಗಿ ಆಳ್ವಕೆಯನ್ನು ಪ್ರಾರಂಭಿಸಿದಾಗ ಅಷ್ಟಾಗಿ ಸರಳವಾಗಿರಲಿಲ್ಲ. ದಕ್ಷಿಣ ಭಾರತದ ಎಲ್ಲೆಡೆಯಲ್ಲಿ ಹಲವಾರು ರಾಜಮನೆತನಗಳು ಅಧಿಕಾರಕ್ಕಾಗಿ ಹೋರಾಟ ಮಾಡುತ್ತಿದ್ದರು. ರಾಷ್ಟ್ರಕೂಟರು ಮತ್ತು ಚೋಳರು ತಮ್ಮ ಅಧಿಕಾರ ವ್ಯಾಪ್ತಿಯನ್ನು ವರ್ಧಿಸಿಕೊಳ್ಳಲು ಹಲವಾರು ಯುದ್ಧಗಳನ್ನು ಮಾಡುತ್ತಿದ್ದರು. ಅಂದಿನ ಪ್ರಮುಖ ರಾಜಮನೆತನಗಳಾದ ತಲಕಾಡಿನ ಗಂಗರು, ಮತ್ತು ನೊಳಂಬರು, ತಮ್ಮ ಬಣಗಳನ್ನು ಆಗಾಗ ಬದಲಿಸುತ್ತ ರಾಜಕೀಯವಾಗಿ ಅಸ್ಥಿರವಾಗಿದ್ದರು.[2] ಆದರೂ ಸಹ ಇವರು ಹೆಚ್ಚು ಕಾಲ ರಾಷ್ಟ್ರಕೂಟರ ಮಾಂಡಲೀಕ ಅರಸರಾಗಿಯೇ ಆಡಳಿತ ನಡೆಸುತ್ತಿದ್ದರು. ಇಂತಹ ರಾಜಕೀಯ ಅಸ್ಥಿರತೆಯನ್ನು ಉಪಯೋಗಿಸಿಕೊಂಡು ಹೊಯ್ಸಳರು ಪ್ರಾರಂಭದಲ್ಲಿ ಒಂದು ಪುಟ್ಟದಾದ ವ್ಯಾಪ್ತಿಯಲ್ಲಿ ರಾಜ್ಯಾಡಳಿತವನ್ನು ಪ್ರಾರಂಭಿಸಿದರು. ಪ್ರಾರಂಭದಿಂದ ಹಿಡಿದು ವಿಷ್ಣುವರ್ಧನನ ತಂದೆಯಾದ ಎರೆಯಂಗನ ಕಾಲದವರೆಗೂ ಸಹ ರಾಷ್ಟ್ರಕೂಟರ ಮತ್ತು ಕಲ್ಯಾಣಿ ಚಾಲುಕ್ಯರ ಮಾಂಡಲೀಕರಾಗಿಯೆ ಮುಂದುವರಿದರು. ಅಂದಿನ ಪರಿಸ್ಥಿತಿಯಲ್ಲಿ ಬಹಳ ಪ್ರಬಲವಾಗಿದ್ದಂತಹ ಕಲ್ಯಾಣಿ ಚಾಲುಕ್ಯರ ಆಡಳಿತದಲ್ಲಿ ಹೊಯ್ಸಳರು ಪ್ರಾರಂಭಿಕ ಅರಸರಾದರು.[3] ಅವರ ಜೊತೆಗೂಡಿ ಹೊಯ್ಸಳರು ಹಲವಾರು ಯುದ್ಧಗಳಲ್ಲಿ ಭಾಗವಹಿಸಿ ನಿರ್ಣಾಯಕ ಪಾತ್ರವಹಿಸಿದರೆಂದು ಹಲವಾರು ಶಾಸನಗಳಿಂದ ತಿಳಿದುಬರುತ್ತದೆ. ಈ ಯುದ್ದಗಳಿಂದಲೆ ಅವರು ತಮ್ಮ ಭದ್ರಬುನಾದಿಯನ್ನು

ಹಾಕುತ್ತ ತಮ್ಮ ದಾರಿಯನ್ನು ಸುಗಮಗೊಳಿಸಿಕೊಂಡರು. ಇದರಿಂದ ಅವರ ರಾಜಕೀಯ ಅನುಭವದಿಂದ ಯುದ್ಧಗಳಲ್ಲಿ ಹಿಡಿತ ಸಾಧಿಸುವ ಕಲೆಯು ಅವರಿಗೆ ಬಂದಿತು.

ಹೊಯ್ಸಳರ ಮೂಲಪುರುಷ ಸಳ ಅಥವಾ ನೃಪಕಾಮ. ಇವರ ಪ್ರಾರಂಭದ ರಾಜಕೀಯ ಇತಿಹಾಸದ ಬಗ್ಗೆ ಐತಿಹಾಸಿಕವಾದಂತಹ ಸ್ಪಷ್ಟನೆ ನೀಡುವ ದಾಖಲೆಗಳಲ್ಲ.[4] ಆದರೆ ಇವರ ಕಾಲದ ಶಾಸನಗಳಲ್ಲಿ ಸಳನೇ ಅವರ ಮೂಲ ಪುರುಷ ಎಂದು ಉಲ್ಲೇಖಿಸಿವೆ ಹಾಗೂ ಇವರು ಯಾದವ ವಂಶಕ್ಕೆ ಸೇರಿದವರೆಂದು ಹೇಳಿಕೊಂಡಿದ್ದಾರೆ. ಲೂಯಿಸ್ ರೈಸ್ ಹಾಗೂ ಮತ್ತಿತರರು ಹೇಳುವಂತೆ ಇವರ ಮೂಲನೆಲೆ ಶಶಾಕಪುರ ಅಥವಾ ಸೊಸೆವೂರು. ಅದನ್ನು ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೋಕಿನ ಈಗಿನ ಅಂಗಡಿ ಎಂಬ ಸ್ಥಳ ಎಂದು ಗುರುತಿಸಲಾಗಿದೆ. ಪ್ರಾಚೀನ ಕಾಲದಲ್ಲಿ ಇದೊಂದು ವ್ಯಾಪಾರ ಕೇಂದ್ರವಾಗಿದ್ದಿತ್ತು. ಈ ಸೊಸೆವೂರನ್ನು ಉಲ್ಲೇಖಿಸುವ ಅನೇಕ ಶಾಸನಗಳಿವೆ.[5] ಕ್ರಿ.ಶ. 1060ರ ಶಾಸನವೊಂದು ಸೊಸೆಯೂರಿನ ವ್ಯಾಪಾರಸ್ಥರು ಸೇರಿ 'ಲೋಕಜಿತನಿಗೆ' ಸ್ಮಾರಕವನ್ನು ನಿರ್ಮಿಸಿದರೆಂದು ಹೇಳಿದೆ.[6] ಆದುದರಿಂದ ಇದೊಂದು ಜೈನ ಕೇಂದ್ರವಾಗಿತ್ತು ಎಂದು ತಿಳಿಯುತ್ತದೆ. ಅಲ್ಲದೆ ಕ್ರಿ.ಶ. 1040ರ ಒಂದು ಶಾಸನ ಜೈನ ಆಚಾರ್ಯನಾದ ವಜ್ರಪಾಣಿ ಭರತೇಶ್ವರನು ಇಲ್ಲಿಯೇ ಕಾಲವಾದನು ಎಂದು ಉಲ್ಲೇಖಿಸುತ್ತದೆ.[7] ಸೊಸೆವೂರೆ ಅಂಗಡಿ ಎಂದು ಹೇಳಲು ಪುರಾವೆಯಾಗಿ ವಿಜಯನಗರದ ಅರಸು ಅಚ್ಯುತರಾಯನ ಶಾಸನವೊಂದರಲ್ಲಿ ಅಂಗಡಿಯ ಉಲ್ಲೇಖ ಅದರ ಭೌಗೋಳಿಕ ವರ್ಣನೆಯು ಕಂಡುಬರುತ್ತದೆ. ಇದರಿಂದ ಅಂಗಡಿಯೆ ಸೊಸೆವೂರು ಎಂದು ಸ್ಪಷ್ಟಪಡಿಸಲು ಉತ್ತಮ ಆಧಾರಗಳಾಗಿವೆ. (ಅವರಿಗಿದ್ದ 'ಮಲೆಪರೋಳ್‌ಗಂಡ' ಎಂಬ ಬಿರುದು ಮತ್ತು ತಮ್ಮ ಶಾಸನಗಳಲ್ಲಿ ತಮ್ಮ ಅಂಕಿತವನ್ನು ಕನ್ನಡದಲ್ಲಿಯೇ ಹಾಕಿರುವುದರಿಂದ ಇವರನ್ನು ಇಲ್ಲಿಯವರೆಂದು ಹೇಳಲಾಗಿದೆ. ಕಾಲಾನುಕ್ರಮದಲ್ಲಿ ಇವರು ಹಲವಾರು ಮುಖಂಡರ ಮೇಲೆ ಪ್ರಭುತ್ವ ಸ್ಥಾಪಿಸಿ 'ಮಲೆಪರೋಳ್‌ಗಂಡ' ಎಂದು ಮಾರ್ಪಟ್ಟರೆಂದು ಹೇಳಲಾಗಿದೆ.[8]

ಹೊಯ್ಸಳ ರಾಜ್ಯ ಸ್ಥಾಪನೆಗೆ ಕಾರಣವಾದ ರೋಚಕ ಘಟನೆಯೊಂದು ಅತ್ಯಂತ ಜನಪ್ರಿಯವಾಗಿ ಅಂದಿನಿಂದಲೂ ಇಂದಿನವರೆಗೂ ಜನಮನದಲ್ಲಿ ಸ್ಥಿರವಾಗಿ ಉಳಿದಿದೆ. ಇವರ ಕಾಲದ ಶಾಸನಗಳು 'ಸಳ' ಈ ವಂಶದ ಮೂಲ ಪುರುಷನೆಂದು ಉಲ್ಲೇಖಿಸಿವೆಯಾದರೂ ಈತ ಐತಿಹಾಸಿಕ ವ್ಯಕ್ತಿಯೇ? ಅಥವಾ ಕಾಲ್ಪನಿಕ ವ್ಯಕ್ತಿಯೆ? ಎಂಬುದು ಸ್ಪಷ್ಟವಾಗಿಲ್ಲ. ಸಳನು ಸೊಸೆಯೂರಿನಲ್ಲಿ ಗುರುಕುಲದ ಸುದತ್ತಾಚಾರ್ಯರೆಂಬ ಜೈನ ಗುರುಗಳ ಹತ್ತಿರ ವ್ಯಾಸಂಗ ಮಾಡುತ್ತಿದ್ದಾಗ, ಹುಲಿಯೊಂದು ಅಲ್ಲಿಗೆ ಪ್ರವೇಶಿಸಿತು. ಆಗ ಸುದತ್ತಾಚಾರ್ಯರು ಸಳನಿಗೆ

'ಪೊಯ್ ಸಳ' ಎಂದು ಆಜ್ಞೆ ಮಾಡಿದರು. ಗುರುವಿನ ಆಜ್ಞೆಯ ಮೇರೆಗೆ ಸಳನು ಹುಲಿಯನ್ನು ಕೊಂದು ತನ್ನ ಶೌರ್ಯ ಮೆರೆದನು. ಈ ಘಟನೆಯಿಂದಲೆ ಪ್ರಾಯಶಃ ಸಳನು ಹೊಯ್-ಸಳ ಹೊಯ್ಸಳನಾದನು. ಇದೇ ಹೆಸರು ಈ ರಾಜಮನೆತನದ ಅನ್ವರ್ಥವಾಯಿತು.

ಹೊಯ್ಸಳರು ಪ್ರಾರಂಭದಲ್ಲಿ ಪಶ್ಚಿಮ ಘಟ್ಟಗಳಲ್ಲಿ ಸಾಮಾನ್ಯವಾದ ಮುಖ್ಯಸ್ಥರಂತೆ ಪ್ರಾಯಶಃ ಸಳ-ನೃಪಕಾಮನ ಕಾಲದಲ್ಲಿ ಅಧಿಕಾರದ ವ್ಯಾಪ್ತಿಯನ್ನು ವೃದ್ಧಿಸಿಕೊಳ್ಳಲು ಪ್ರಾರಂಭಿಸಿದ್ದಂತೆ ಕಂಡುಬರುತ್ತದೆ. ಈತನು ಚೋಳರ ವಿರುದ್ಧವೂ ಹೋರಾಡಿದನೆಂದು ಹೇಳಲಾಗಿದೆ. ನೃಪಕಾಮನ ಮಗ ವಿನಯಾದಿತ್ಯನು (1046-1098) ಅಧಿಕಾರ ವಹಿಸಿಕೊಂಡು ಸುಮಾರು 50 ವರ್ಷಗಳ ಕಾಲ ರಾಜ್ಯವನ್ನಾಳಿದನು. ಇವನ ಕಾಲದಲ್ಲಿಯೆ ಸೊಸೆಯೂರಿನಿಂದ ಅವರ ರಾಜಕೀಯ ಕಾರ್ಯಕ್ಷೇತ್ರವು ಬೇಲೂರಿಗೆ ವರ್ಗವಾಯಿತು. ನಂತರದಲ್ಲಿ ಹಳೇಬೀಡಿಗೆ ವರ್ಗಾಯಿಸಲಾಯಿತು. ಇವನ ಕಾಲವು ಅತ್ಯಂತ ಮಹತ್ವದ ಕಾಲಘಟ್ಟವಾಗಿದೆ. ಚೋಳರು ತಲಕಾಡನ್ನು ಆಕ್ರಮಿಸಿಕೊಂಡರು, ಗಂಗರನ್ನು ತಲಕಾಡಿನಿಂದ ಓಡಿಸಿದರು. ಇತ್ತ ಕಡೆ ಚೋಳರು ಮತ್ತು ಕಲ್ಯಾಣಿ ಚಾಲುಕ್ಯರು ತಮ್ಮ ತಮ್ಮ ರಾಜ್ಯವಿಸ್ತಾರಕ್ಕಾಗಿ ಯುದ್ಧಗಳಲ್ಲಿ ತೊಡಗಿದ್ದರು. ವಿನಯಾದಿತ್ಯನು ಕಲ್ಯಾಣಿ ಚಾಲುಕ್ಯರ ಮಾಂಡಲೀಕನಾಗಿದ್ದರಿಂದ ಅವರೊಡನೆ ಸೇರಿ ಚೋಳರೊಂದಗಿನ ಹಲವಾರು ಯುದ್ಧಗಳಲ್ಲಿ ಭಾಗವಹಿಸಿದನು. ನಂತರದಲ್ಲಿ ಈತನು ಚೆಂಗಾಳ್ವರು, ಕೊಂಗಾಳ್ವರು, ಹೊಂಬುಜದ ಶಾಂತರಸರು ಮತ್ತು ಬಯಲುನಾಡಿನ (ಮಲೆನಾಡಿನ) ಕದಂಬರನ್ನು ಸೋಲಿಸಿ ರಾಜ್ಯವನ್ನು ವಿಸ್ತರಿಸಿದನು.

ವಿನಯಾದಿತ್ಯನ ಮಗನಾದ ಎರೆಯಂಗನು (1098-1102) ಹೆಚ್ಚು ವರ್ಷಗಳ ಕಾಲ ರಾಜ್ಯಭಾರ ಮಾಡಲಿಲ್ಲ. ಈತನು ತನ್ನ ತಂದೆಯ ಕಾಲದಲ್ಲಿಯೆ ಒಬ್ಬ ಶ್ರೇಷ್ಠ ದಂಡನಾಯಕನಾಗಿದ್ದು ಚಾಲುಕ್ಯರ ದೊರೆ ವಿಕ್ರಮಾದಿತ್ಯನ ಜೊತೆ ಉತ್ತರದ ದಂಡಯಾತ್ರೆಗಳಲ್ಲಿ ಭಾಗವಹಿಸಿ ಚಿತ್ರಕೂಟ, ಕಳಿಂಗ ಮತ್ತು ಧಾರಾ ರಾಜರನ್ನು ಸೋಲಿಸಿ ಹೆಸರುಗಳಿಸಿದ್ದನು. ಅಲ್ಲದೆ ಯುವರಾಜನಾಗಿದ್ದಾಗಲೆ ತನ್ನ ತಂದೆಯೊಂದಿಗೆ ಕೂಡಿಕೊಂಡು ರಾಜಕೀಯದಲ್ಲಿ ಅನುಭವ ಪಡೆದಿದ್ದನು. ಅಲ್ಲದೆ ಹಲವಾರು ಯುದ್ದಗಳಲ್ಲಿ ಭಾಗವಹಿಸಿದನು. ಈ ಹೊತ್ತಿಗಾಗಲೇ ಹೊಯ್ಸಳರ ಈ ರಾಜರುಗಳು ಹಲವಾರು ಬಿರುದುಗಳನ್ನು ಸಹ ಹೊಂದಲು ಪ್ರಾರಂಭಿಸಿದರು. ಕೆಲವು ಶಾಸನಗಳು ಇವನನ್ನು ಮಹಾಮಂಡಲೇಶ್ವರನೆಂದು ಕರೆದು ಇವನು ದ್ವಾರಾವತಿಯಿಂದ ಆಳುತ್ತಿದ್ದನೆಂದೂ ಹೇಳುತ್ತವೆ.[9] ಎರೆಯಂಗನ ಮೊದಲ ಮಗ ಒಂದನೆ ಬಲ್ಲಾಳನು ಕ್ರಿ.ಶ.1102ರಲ್ಲಿ ಅಧಿಕಾರ ವಹಿಸಿಕೊಂಡು ಕ್ರಿ.ಶ.1106ರ ವರೆಗೆ ಆಳಿದನು. ಇವನು ಅಕಾಲ ಮರಣಕ್ಕೆ ತುತ್ತಾದ

ನಂತರದಲ್ಲಿ ಕ್ರಿ.ಶ. 1106ರಲ್ಲಿ ಇವನ ತಮ್ಮನಾದ ಬಿಟ್ಟಿಗ. ಬಿಟ್ಟಿದೇವ ಎಂಬ ಹೆಸರಿನಿಂದ ಕರೆಯುತ್ತಿದ್ದ ವಿಷ್ಣುವರ್ಧನನು ಅಧಿಕಾರಕ್ಕೆ ಬಂದನು.

ವಿಷ್ಣುವರ್ಧನನು ಕ್ರಿ.ಶ.1106ರಿಂದ 1142ರ ವರೆಗೆ ಆಡಳಿತ ನಡೆಸಿದನು. ಈತನು ತನ್ನ ರಾಜ್ಯವನ್ನು ವಿಸ್ತರಿಸಲು ತಲಕಾಡನ್ನು ಆಕ್ರಮಿಸಿಕೊಂಡಿದ್ದ ಚೋಳರನ್ನು ಎದುರಿಸಿದ. ರಾಜೇಂದ್ರ ಚೋಳನ ಅಧಿಕಾರಿಗಳಾದ ಅಡಿಯಮ. ದಾಮೋದರ. ನರಸಿಂಹ ಎಂಬುವವರನ್ನು ಸೋಲಿಸಿ ತಲಕಾಡನ್ನು ಮರಳಿ ಪಡೆದು "ವೀರಗಂಗ' ಮತ್ತು 'ತಲಕಾಡುಗೊಂಡ' ಎಂಬ ಬಿರುದನ್ನು ಧರಿಸಿದ. ಈ ಯುದ್ಧವು ಅವನ ಮಹತ್ಸಾಧನೆಯಾಗಿತು. ಈ ವಿಜಯದ ಜ್ಞಾಪಕಾರ್ಥವಾಗಿ ತಲಕಾಡಿನಲ್ಲಿ 'ಕೀರ್ತಿನಾರಾಯಣ' ದೇವಾಲಯ[10] ಮತ್ತು ಬೇಲೂರಿನಲ್ಲಿ ವಿಜಯನಾರಾಯಣ ಅಥವಾ ಚೆನ್ನಕೇಶವ ದೇವಾಲಯಗಳನ್ನು ನಿರ್ಮಿಸಿದನು.[11] ಚೋಳರಿಂದ ನೊಳಂಬವಾಡಿಯನ್ನು ಮರಳಿಪಡೆದು 'ನೊಳಂಬವಾಡಿಗೊಂಡ' ಎಂಬ ಬಿರುದನ್ನು ಧರಿಸಿದ್ದ.[12] ಇವನ ಕಾಲದಲ್ಲಿ ಸಂಪೂರ್ಣವಾಗಿ ಚೋಳರ ಆಡಳಿತ ತಪ್ಪಿಹೋಯಿತು. ತದನಂತರ ವಿಷ್ಣುವರ್ಧನನು ಚಾಲುಕ್ಯ ವಿಕ್ರಮಾದಿತ್ಯನನ್ನು ಕ್ರಿ.ಶ. 1118ರಲ್ಲಿ ಎದುರಿಸಿದ ಈ ಯುದ್ಧದಲ್ಲಿ ಚಾಲುಕ್ಯರು ಸೋಲೊಪ್ಪಬೇಕಾಯಿತು. ಅನಂತರದಲ್ಲಿ ಗೋವೆಯ ಕದಂಬರು, ಹಾನಗಲ್ಲಿನ ಕದಂಬರು ಸೋತು ಶರಣಾದರು. ದಕ್ಷಿಣದಲ್ಲಿ ರಾಜ್ಯವಿಸ್ತಾರ ಮಾಡಿ ತನ್ನ ಬಲವನ್ನು ವೃದ್ಧಿ ಮಾಡಿಕೊಂಡ ಮೇಲೆ ತನ್ನ ಸಾಮ್ರಾಟ ಆರನೆ ವಿಕ್ರಮಾದಿತ್ಯನಿಗೆ ಸೇರಿದ್ದ ಪ್ರದೇಶಗಳ ಮೇಲೆ ಧಾಳಿಯನ್ನು ಆರಂಭಿಸಿದನು. ತುಂಗಭದ್ರಾ ನದಿಯನ್ನು ದಾಟಿ ಈಗಿನ ಬಳ್ಳಾರಿ ಮತ್ತು ಧಾರವಾಡ ಜಿಲ್ಲೆಯ ಪ್ರದೇಶಗಳನ್ನು ಗೆದ್ದು ಕೃಷ್ಣಾನದಿಯವರೆಗೆ ಮುನ್ನಡೆಸಿದನು.

ವಿಷ್ಣುವರ್ಧನನ ವ್ಯಕ್ತಿತ್ವ ಬಹುಮುಖವಾದುದು. ಈತನು ಒಬ್ಬ ಧೀಮಂತ ಹಾಗೂ ಮುತ್ಸದ್ಧಿಯೂ ಆಗಿದ್ದನು. ಇವನ ಮೂಲ ನಾಮಾಂಕಿತ ಬಿಟ್ಟಿದೇವ. ರಾಮಾನುಜರ ಪ್ರಭಾವದಿಂದಾಗಿ ಶ್ರೀವೈಷ್ಣವ ಧರ್ಮವನ್ನು ಸ್ವೀಕರಿಸಿ ವಿಷ್ಣುವರ್ಧನನಾದ. ಕರ್ನಾಟಕ ಇತಿಹಾಸದಲ್ಲಿ ಇದೆ ಹೆಸರಿನಿಂದ ಖ್ಯಾತನಾಮನಾಗಿದ್ದಾನೆ. ಇವನ ಕಾಲದಲ್ಲಿ ತಮಿಳುನಾಡಿನಿಂದ ಅವನ ಆಶ್ರಯ ಅರಸಿಬಂದ ಶ್ರೀ ರಾಮಾನುಜಾಚಾರ್ಯರಿಗೆ ರಾಜಾಶ್ರಯ ನೀಡಿ ಅವರು ಸ್ಥಾಪಿಸಿದ ಶ್ರೀವೈಷ್ಣವ ಧರ್ಮದ ಅನುಯಾಯಿಯಾಗಿ ಶ್ರೀವೈಷ್ಣವ ಧರ್ಮಕ್ಕೆ ಅಪಾರವಾದ ಸಹಾಯಮಾಡಿದನು. ಇವನ ಹೆಂಡತಿಯಾದ ಶಾಂತಲಾದೇವಿಯೂ ಸೇರಿದಂತೆ ಅವನ ಹಲವು ದಂಡನಾಯಕ ಗಂಗರಾಜ ನಿಷ್ಠಾವಂತ ಜಿನಭಕ್ತರಾಗಿದ್ದರು. ಇವರ ರಾಣಿಯಾದ ಶಾಂತಲಾದೇವಿಯು 'ನಾಟ್ಯ ಸರಸ್ವತಿ' ಎಂದು ಹೆಸರು ಪಡೆದಿದ್ದಳು. ಅವಳೂ ಕೂಡಾ ಸುಸಂಸ್ಕೃತಳು, ವಿಧ್ಯಾವಂತಳೂ ಆಗಿದ್ದಳು.

ಈತನು ವೈಷ್ಣವ ಧರ್ಮವನ್ನು ಅಂಗೀಕರಿಸಿದರೂ ಸರ್ವಧರ್ಮ ಸಹಿಷ್ಣುವಾಗಿದ್ದನು. ಇವನ ಕಾಲದಲ್ಲಿ ವೈಷ್ಣವ, ಶೈವ ಮತ್ತು ಜೈನ ದೇವಾಲಯಗಳು ನಿರ್ಮಾಣವಾದವು. ಈತನ ಕಾಲದಲ್ಲಿ ತಲಕಾಡು, ಬೇಲೂರು, ಮೇಲುಕೋಟೆ, ದೊಡ್ಡಗದ್ದವಳ್ಳಿ, ಮರಳೆ, ಮುಂತಾದ ಕಡೆಗಳಲ್ಲಿ ದೇವಾಲಯಗಳನ್ನು, ಬಸದಿಗಳನ್ನು ನಿರ್ಮಿಸಿದನು. ಹಾಗೂ ತನ್ನ ಹಿ ರಿಯರು ನಿರ್ಮಿಸಿದ ದೇವಾಲಯಗಳನ್ನು ಪುನರುಜ್ಜೀವನಗೊಳಸಿ ದಾನದತ್ತಿಗಳನ್ನು ನೀಡಿದನು.

ವಿಷ್ಣುವರ್ಧನನ ಮಗ ಒಂದನೇಯ ನರಸಿಂಹನು ಕ್ರಿ.ಶ.1142ರಲ್ಲಿ ಸಿಂಹಾಸನಕ್ಕೆ ಬಂದನು.[13] ಇವನು ಪಟ್ಟಕ್ಕೆ ಬಂದಾಗ ಇನ್ನೂ ಎಂಟು ವರ್ಷದ ಬಾಲಕ. ಈತನಿಗೆ ವಿಷ್ಣುವರ್ಧನನ ನಿಷ್ಠಾವಂತ ದಂಡನಾಯಕರು ಮತ್ತು ಮಂತ್ರಿಗಳು ಇವನಿಗೆ ಆಡಳಿತದಲ್ಲಿ ನೆರವಾದರು. ಇವರಂತೆಯೇ 'ಗರುಡ'ರೆಂಬ ರಾಜಭಟರು ರಾಜನಿಗೆ ನಿಷ್ಠೆಯಿಂದ ಸೇವೆ ಸಲ್ಲಿಸುತ್ತಿದ್ದರು. ಗರುಡ ಪದ್ಧತಿ ಹೊಯ್ಸಳರ ಕಾಲದ ಒಂದು ವಿಶಿಷ್ಟ ಪದ್ಧತಿ. ಇವರೆಲ್ಲರ ಅವಿರತ ಸೇವೆಯಿಂದಾಗಿ ಒಂದನೆ ನರಸಿಂಹನು ಸುಮಾರು ಮೂವತ್ತು ವರ್ಷಗಳ ಕಾಲ ರಾಜ್ಯವಾಳದನು. ಈತನು ತಂದೆಯಷ್ಟು ಸಮರ್ಥನಾಗಿರಲಿಲ್ಲ. ಭೋಗ ಜೀವನಕ್ಕೆ ಮಾರುಹೋಗಿ ತನ್ನೆಲ್ಲ ಶಕ್ತಿ ಸಾಮರ್ಥ್ಯಗಳನ್ನು ನಂದಿಸಿಕೊಂಡಿದ್ದನು.[14] ಇವನ ಪಟ್ಟದರಾಣಿ ಏಚಲಾದೇವಿ ಮತ್ತು ಯುವರಾಜ ಬಲ್ಲಾಳನನ್ನು ಆಡಳಿತದಲ್ಲಿ ನೇಮಿಸಿಕೊಂಡು ತಾನು ಮಾತ್ರ ಅಧಿಕಾರಕ್ಕೆ ಅಂಟಿಕೊಂಡಿದ್ದನು. ಸಂಧ್ಯಾಕಾಲದಲ್ಲಿ ರಾಜ್ಯದಲ್ಲಿ ಗೊಂದಲಮಯ ಪರಿಸ್ಥಿತಿ ತಲೆದೋರಿತ್ತು. ರಾಜ್ಯ ರಕ್ಷಣೆಯ ದೃಷ್ಟಿಯಿಂದ ಕುಮಾರ ಇಮ್ಮಡಿ ಬಲ್ಲಾಳನು ತಂದೆಯ ವಿರುದ್ಧ ಸಿಡಿದೆದ್ದು ಕ್ರಿ.ಶ.1173ರಲ್ಲಿ ಅಧಿಕಾರವಹಿಸಿಕೊಂಡನು. ಈತನು ತಂದೆಯಂತೆಯೇ ಹಲವಾರು ದೇವಾಲಯಗಳನ್ನು ನಿರ್ಮಿಸಿದನು. ಹಳೇಬೀಡಿನ ಹೊಯ್ಸಳೇಶ್ವರ, ಕಿಕ್ಕೇರಿಯ ಬ್ರಹ್ಮೇಶ್ವರ, ಹೊನ್ನಾವರದ ಕೇಶವೇಶ್ವರ, ಕೋರಮಂಗಲ, ಹುಲ್ಲೇಕೆರೆ, ತೆಂಗಿನಗಟ್ಟು, ನಾಗಮಂಗಲದಲ್ಲಿ ಚೆನ್ನಕೇಶವ ದೇವಾಲಯಗಳನ್ನು ನಿರ್ಮಿಸಿದ ಇದರ ಜೊತೆಯಲ್ಲಿ ಕೆಲವು ಜೈನಬಸದಿಗಳು ಕೂಡ ಇವನ ಕಾಲದಲ್ಲಿ ನಿರ್ಮಾಣವಾದವು.

ನರಸಿಂಹನ ಮಗ ಇಮ್ಮಡಿ ಬಲ್ಲಾಳನು ಕ್ರಿ.ಶ.1173ರಲ್ಲಿ ಅಧಿಕಾರಕ್ಕೆ ಬಂದನು.[15] ಇವನು ಹೊಯ್ಸಳ ವಂಶದ ಅತ್ಯಂತ ಸಮರ್ಥ ಮತ್ತು ಶ್ರೇಷ್ಠ ದೊರೆಗಳಲ್ಲಿ ಒಬ್ಬನಾಗಿದ್ದನು. ಇವನ ಕಾಲದಲ್ಲಿಯೇ ಚಾಲುಕ್ಯರ ಸಾಮಂತಿಕೆಯನ್ನು ಕಿತ್ತೋಗೆದು ಸ್ವತಂತ್ರನಾದುದು ಮತ್ತು ಹೊಯ್ಸಳ ಸಾಮ್ರಾಜ್ಯವನ್ನು ವಿಸ್ತರಿಸಿ 'ದಕ್ಷಿಣ ಸಾರ್ವಭೌಮ' ಎಂಬ ಬಿರುದನ್ನು ಪಡೆದನು. ಚಂಗಾಳ್ವ, ಕೊಂಗಾಳ್ವ, ಉಚ್ಛಂಗಿಯ ಪಾಂಡ್ಯರು, ಯಾದವ ಹೀಗೆ ಹಲವಾರು ರಾಜರುಗಳನ್ನು ಸೋಲಿಸಿ ತನ್ನ ರಾಜ್ಯವನ್ನು ವಿಸ್ತರಿಸಿದ. ಚೋಳರ ರಾಜಕೀಯದಲ್ಲಿ ತನ್ನ ಕೈ ಹಾಕಿದ ಪಾಂಡ್ಯರು,

ಚೋಳರೊಂದಿಗೆ ಯುದ್ಧ ಮಾಡಿ ಅವರನ್ನು ಸೋಲಿಸಿದನು. ಮತ್ತೆ ಕುಲೋತ್ತುಂಗನಿಗೆ ಚೋಳ ರಾಜ್ಯವನ್ನು ಮರಳಿಸಿದ. ಇದರಿಂದ ಇವನಿಗೆ 'ಚೋಳ ರಾಜ್ಯ ಪ್ರತಿಷ್ಠಾಪನಾಚಾರ್ಯ' ಎಂಬ ಬಿರುದು ಬಂದಿತು. ಕ್ರಿ.ಶ.1190ರಲ್ಲಿ ಧಾರವಾಡ ಜಿಲ್ಲೆಯ ಸೊರಟೂರಿನ ಹತ್ತಿರ ಭೀಕರ ಯುದ್ಧ ನಡೆಯಿತು. ಬಲ್ಲಾಳನು ಸೊರಟೂರು ಯುದ್ಧದಲ್ಲಿ ಅಪ್ರತಿಮವಾಗಿ ಜಯಗಳಿಸಿದ. ಸೇವುಣ ಸೈನ್ಯವನ್ನು ಸಂಪೂರ್ಣವಾಗಿ ಸೋಲಿಸಿ ಭಿಲ್ಲಮನನ್ನು ಗದಗ ಮತ್ತು ಬಾದಾಮಿಯವರೆಗೆ ಓಡಿಸಿದನು. ಈತನು ಸರ್ವಧರ್ಮಗಳಿಗೆ ಸಮಾನ ಪ್ರೋತ್ಸಾಹ ನೀಡಿದನು, ಕಲೆ ಮತ್ತು ಸಾಹಿತ್ಯಗಳ ಉದಾರ ಪೋಷಕ. ಇವನ ಆಸ್ಥಾನ ಕವಿ ಜನ್ನ ಹಾಗೂ ರಾಘವಾಂಕ, ನೇಮಿಚಂದ್ರ, ಕಂತಿ, ನಾಗಚಂದ್ರ ಇತ್ಯಾದಿ ಕವಿಗಳು ಇವನ ರಾಜ್ಯದಲ್ಲಿದ್ದರು. ಇವನ ಕಾಲದಲ್ಲಿಯೂ ಸಹ ದೇವಾಲಯಗಳ ನಿರ್ಮಾಣ ಕಾರ್ಯವು ಮುಂದುವರೆಯಿತು. ಗದುಗಿನ ವೀರನಾರಾಯಣ ಮತ್ತು ತ್ರಿಕೂಟೇಶ್ವರ ದೇವಾಲಯಗಳಿಗೆ ಹಲವಾರು ದಾನದತ್ತಿಗಳನ್ನು ನೀಡಿದನು.

ಇಮ್ಮಡಿ ನರಸಿಂಹನು ತನ್ನ ತಂದೆಯಾದ ಇಮ್ಮಡಿ ಬಲ್ಲಾಳನ ತರುವಾಯ ಕ್ರಿ.ಶ.1220ರಲ್ಲಿ ಹೊಯ್ಸಳ ಸಿಂಹಾಸನವನ್ನೇರಿದ. ಯುವರಾಜನಾಗಿದ್ದಾಗಲೇ ನರಸಿಂಹನು ಚೋಳರ ವಿರುದ್ಧ ದಂಡಯಾತ್ರೆಯಲ್ಲಿ ಭಾಗವಹಿಸಿದನು. ಇವನ ಕಾಲದಲ್ಲಿ ಚೋಳ ಮತ್ತು ಹೊಯ್ಸಳ ಸಂಬಂಧಗಳು ಸಾಕಷ್ಟು ಅಭಿವೃದ್ಧಿ ಹೊಂದಿದವು. ವಿಶೇಷವಾಗಿ ತಮಿಳುನಾಡಿನಲ್ಲಿ ಹೊಯ್ಸಳ ಪ್ರಭಾವವನ್ನು ಬೀರಿದ ಕೀರ್ತಿ ನರಸಿಂಹನಿಗೆ ಸಲ್ಲಬೇಕು. ಚೋಳರೊಡಗೂಡಿ ಪಾಂಡ್ಯರೊಂದಿಗೆ ಹಲವಾರು ಯದ್ಧಗಳಲ್ಲಿ ಜಯಿಸಿದನು. ಈತನ ಮಗ ಸೋಮೇಶ್ವರನು ತನ್ನ ಹೆಚ್ಚಿನ ಸಮಯವನ್ನು ತಮಿಳುನಾಡಿನಲ್ಲಿಯೆ ಕಳೆದ. ನರಸಿಂಹನು ತಮಿಳುನಾಡಿನ ತಂಜಾವೂರಿನವರೆಗೂ ರಾಜ್ಯ ವಿಸ್ತರಿಸಿ ಶ್ರೀರಂಗಂ ಹತ್ತಿರದ ಕಣ್ಣಾನೂರಿನಲ್ಲಿ ಹೊಯ್ಸಳರ ದಕ್ಷಿಣದ ರಾಜಧಾನಿಯನ್ನು ಸ್ಥಾಪಿಸಿದ. ಇಲ್ಲಿಗೆ ತನ್ನ ಮಗನಾದ ಸೋಮೇಶ್ವರನನ್ನು ಆಡಳಿತ ನಡೆಸಲು ನೇಮಿಸಿದ. ಸೋಮೇಶ್ವರನ ಕಾಲದಲ್ಲಿ ಕಣ್ಣಾನೂರು ದಕ್ಷಿಣದಲ್ಲಿ ಹೊಯ್ಸಳರ ಪ್ರಮುಖ ರಾಜಕೀಯ ಕಾರ್ಯಕ್ಷೇತ್ರವಾಯಿತು. ನರಸಿಂಹನು ತನ್ನ ಕಾಲದಲ್ಲಿ ಹರಿಹರದ ಹರಿಹರೇಶ್ವರ, ಬೇಲೂರಿನ ಮೂಲ ಸಂಗಮೇಶ್ವರ, ಹೆಗ್ಗರೆಯ ಕಲ್ಲೇಶ್ವರ ಮತ್ತು ಗಳಗೇಶ್ವರ, ಹಾರನಹಳ್ಳಿಯ ಸೋಮೇಶ್ವರ ಮತ್ತು ಕೇಶವ, ಬಸರಾಳಿನ ಮಲ್ಲಿಕಾರ್ಜುನ, ಭದ್ರಾವತಿಯ ಲಕ್ಷ್ಮೀನರಸಿಂಹ, ಇನ್ನೂ ಮುಂತಾದ ದೇವಾಲಯಗಳು ನಿರ್ಮಾಣವಾದವು. ಇವನ ಕಾಲದಲ್ಲಿ ಜೈನ ಬಸದಿಗಳು ಸಹ ನಿರ್ಮಾಣಗೊಂಡವು.

ಸೋಮೇಶ್ವರ ಅಥವಾ ಸೋವಿದೇವನು ಇಮ್ಮಡಿ ನರಸಿಂಹನ ನಂತರ ಕ್ರಿ.ಶ.1235ರಲ್ಲಿ ಅಧಿಕಾರಕ್ಕೆ ಬಂದನು. ಇವನು ತನ್ನ ಆಳ್ವಿಕೆಯ ಬಹು ಸಮಯವನ್ನು ತಮಿಳುನಾಡಿನ

ಕಣ್ಣಾನೂರಿನಲ್ಲಿ ಕಳೆದನು. ದಕ್ಷಿಣದಲ್ಲಿ ಖಾಯಂ ರಾಜಧಾನಿಯನ್ನು ಬೆಳೆಸಿದ ಕೀರ್ತಿ ಮತ್ತು ತಮಿಳುನಾಡಿನಲ್ಲಿ ಹೊಯ್ಸಳರ ವಾಸ್ತುಕಲೆಯನ್ನು ಹಾಗೂ ಸಂಸ್ಕೃತಿಯನ್ನು ಹರಡಿದ ಕೀರ್ತಿಯೂ ಸೋಮೇಶ್ವರನಿಗೆ ಸಲ್ಲಬೇಕು. ಈತನು ಚೋಳ ಸಂಬಂಧಿಗಳನ್ನು ರಕ್ಷಿಸಲೋಸುಗ ಕಾಕತೀಯರ, ತೆಲುಗು ಚೋಳರ ಮತ್ತು ಪಾಂಡ್ಯರ ವಿರುದ್ಧ ಹಲವಾರು ಯುದ್ಧ ಕೈಗೊಂಡಿದ್ದನು. ಕೊನೆಯಲ್ಲಿ ಇವನು ಜಾತವರ್ಮ ಸುಂದರಪಾಂಡ್ಯನ ವಿರುದ್ಧ ಹೋರಾಡುತ್ತಿರುವಾಗಲೇ ಮಡಿದನು. ಕಾಕತೀಯರ ದೊರೆ ಗಣಪತಿ ಮತ್ತು ರಾಣಿ ರುದ್ರಮದೇವಿಯರು ತೆಲುಗು ಪ್ರದೇಶಗಳನ್ನು ವಶಪಡಿಸಿಕೊಂಡರು. ಇದೆ ಕಾಲಕ್ಕೆ ಸೇವುಣರು ತುಂಗಭದ್ರಾ ನದಿಯನ್ನು ದಾಟಿ ಇವನ ರಾಜ್ಯದ ಉತ್ತರ ಭಾಗಗಳನ್ನು ವಶಪಡಿಸಿಕೊಂಡರು.

ಸೋಮೇಶ್ವರನ ರಾಜಕೀಯದ ಮುಖ್ಯ ಘಟನೆ ಎಂದರೆ, ಹೊಯ್ಸಳ ಆಡಳಿತ ಕೇಂದ್ರವನ್ನು ದೋರಸಮುದ್ರದಿಂದ ತಮಿಳುನಾಡಿನ ಕಣ್ಣಾನೂರಿಗೆ ಬದಲಾಯಿಸಿದ. ಕ್ರಿ.ಶ.1229ರಿಂದ[16] ನಂತರದಲ್ಲಿ ಕಣ್ಣಾನೂರು ಕ್ರಿಯಾತ್ಮಕ ಮತ್ತು ರಾಜಕೀಯದ ಅಧಿಕಾರ ಕೇಂದ್ರವಾಗಿ ಬೆಳೆಯಿತು. ಸೋಮೇಶ್ವರನು ಚೋಳರ ದೊರೆ ಮೂರನೆ ರಾಜರಾಜನು ಪದಚ್ಯುತಗೊಂಡಾಗ ಅವನಿಗೆ ಪುನಃ ರಾಜ್ಯಗಳಿಸುವಲ್ಲಿ ಸಹಾಯ ಒದಗಿಸಿದ. ಇದರಿಂದ ಈತನಿಗೆ 'ಚೋಳರಾಜ್ಯ ಪ್ರತಿಷ್ಠಾಪನಾಚಾರ್ಯ' ಎಂಬ ಬಿರುದನ್ನು ಹೊಂದಿದ.[17] ಈತನು ಕಣ್ಣಾನೂರಿನಲ್ಲಿದ್ದು ಕೊಂಡು ರಾಜ್ಯಭಾರ ಮಾಡಿದರೂ ಕರ್ನಾಟಕದಲ್ಲಿ ದೇವಾಲಯಗಳ ಮತ್ತು ಜಿನಾಲಯಗಳ ನಿರ್ಮಾಣ ಕಾರ್ಯವನ್ನು ಮಾಡಿದನು. ಇವನ ಕಾಲದಲ್ಲಿಯೂ ಸಹ ಅತ್ಯಂತ ಉತ್ತಮ ವಾಸ್ತು ಮತ್ತು ಶಿಲ್ಪ ರಚನೆಗಳುಳ್ಳ ದೇವಾಲಯಗಳ ರಚನೆಯಾದವು. ಸೋಮೇಶ್ವರನ ಕಾಲದಲ್ಲಿ ರಚನೆಯಾದ ನುಗ್ಗಿಹಳ್ಳಿಯಲ್ಲಿಯ ಲಕ್ಷ್ಮೀನರಸಿಂಹ ಮತ್ತು ಸದಾಶಿವ ದೇವಾಲಯ, ಹೊಸಹೊಳಲಿನ ಲಕ್ಷೀನಾರಾಯಣ, ಜಾವಗಲ್ಲಿನ ಲಕ್ಷೀನರಸಿಂಹ, ಹೊಸಬೂದನೂರಿನ ಪದ್ಮನಾಭ, ಮತ್ತು ಈಶ್ವರ, ಗೋವಿಂದನಹಳ್ಳಿಯ ಪಂಚಲಿಂಗದೇವಾಲಯ, ನಾಗಲಾಪುರದ ಕೇದಾರೇಶ್ವರ ಇನ್ನೂ ಮುಂತಾದ ದೇವಾಲಯಗಳು ನಿರ್ಮಾಣವಾದವು.

ಸೋಮೇಶ್ವರನು ಕ್ರಿ.ಶ.1255ರ ಸುಮಾರಿಗೆ ದೋರಸಮುದ್ರಕ್ಕೆ ತನ್ನ ಮೊದಲ ಮಗ ಮುಮ್ಮಡಿ ನರಸಿಂಹನನ್ನು ಮತ್ತು ಕಣ್ಣಾನೂರಲ್ಲಿ ಮತ್ತೊಬ್ಬ ಮಗ ರಾಮನಾಥನನ್ನು ಅಧಿಕಾರ ನಡೆಸಲು ನೇಮಿಸಿದನು. ವಿಶಾಲವಾದ ಹೊಯ್ಸಳ ಸಾಮ್ರಾಜ್ಯವನ್ನು ವ್ಯವಸ್ಥಿತವಾಗಿ ನಡೆಸಿಕೊಂಡು ಹೋಗಲು ಅಧಿಕಾರ ವಿಕೇಂದ್ರಿಕರಣ ಅವಶ್ಯಕವಾಗಿದ್ದರೂ ಸೋಮೇಶ್ವರನ ಕಾಲದ ನಂತರ ದಾಯಾದಿ ಕಲಹಕ್ಕೆ ಇದು ನಾಂದಿ ಹಾಡಿತು. ಆದರೆ ಇಲ್ಲಿ ಶ್ರೀಮಂತವಾದ ದೋರಸಮುದ್ರವನ್ನು

ಪಡೆಯುವ ಉದ್ದೇಶದಿಂದ ರಾಮನಾಥನು ನರಸಿಂಹನ ಮೇಲೆ ಹಲವಾರು ಯುದ್ಧಗಳನ್ನು ಕೈಗೊಂಡನು. ಈ ಸಮಯವನ್ನೇ ಕಾಯುತ್ತಿದ್ದ ವೈರಿಗಳು ಹೊಯ್ಸಳರ ಮೇಲೆ ಯುದ್ಧ ಸಾರಿದರು ಸೇವುಣರ ರಾಮಚಂದ್ರ ಇದೇ ಸಮಯದಲ್ಲಿ ನರಸಿಂಹನ ಮೇಲೆ ಯುದ್ಧ ಸಾರಿದ ಸೇವುಣರನ್ನು ಮೂರನೇ ನರಸಿಂಹನ ವೀರದಂಡನಾಯಕನು ಸೋಲಿಸಿದನು.[18] ರಾಮನಾಥನು ಅತ್ತ ಕಣ್ಣಾನೂರಿನಲ್ಲಿ ರಾಜ್ಯ ನಡೆಸುತ್ತಿದ್ದಾಗ ಜಟಾವರ್ಮ ಸುಂದರ ಪಾಂಡ್ಯನು ರಾಮನಾಥನನ್ನು ಸೋಲಿಸಿ ಕಣ್ಣಾನೂರನ್ನು ಆಕ್ರಮಿಸಿಕೊಂಡನು. ಆದಾಗ್ಯೂ ರಾಮನಾಥನು ನರಸಿಂಹನ ಮೇಲೆ ಹಗೆ ಸಾಧಿಸುವುದನ್ನು ಮುಂದುವರೆಸಿದಂತೆ ತೋರುತ್ತದೆ. ಹೀಗಾಗಿ ದಾಯಾದಿ ಕಲಹದಲ್ಲಿ ಹೊಯ್ಸಳರ ಸಾಮ್ರಾಜ್ಯದಲ್ಲಿ ಅಶಾಂತಿ ತಲೆದೋರಲು ಪ್ರಾರಂಭವಾಯಿತು. ಇದೆ ಸಂದರ್ಭದಲ್ಲಿ ನರಸಿಂಹನ ಮಗ ಮೂರನೆ ಬಲ್ಲಾಳನು ಅಧಿಕಾರಕ್ಕೆ ಬಂದನು. ಮೂರನೇ ನರಸಿಂಹನು ಹೆಚ್ಚು ಸಮಯವನ್ನು ಯುದ್ಧದಲ್ಲಿಯೆ ಕಳೆದರೂ ಸಹ ಹಲವಾರು ದೇವಾಲಯಗಳನ್ನು ನಿರ್ಮಿಸಿದನು. ಇವನ ಕಾಲದ ದೇವಾಲಯಗಳೆಂದರೆ ತುರುವೇಕೆರೆಯ ಚೆನ್ನಕೇಶವ ಅಥವಾ ಚೆನ್ನಿಗರಾಯ ಮತ್ತು ಮೂಲೆ ಶಂಕರೇಶ್ವರ, ಸೆಟ್ಟಿಕೆರೆಯ ಯೋಗಮಾಧವ, ಸೋಮನಾಥಪುರದ ಕೇಶವ, ವಿಘ್ನಸಂತೆಯ ಲಕ್ಷ್ಮೀನರಸಿಂಹ, ಇನ್ನೂ ಮುಂತಾದ ದೇವಾಲಯಗಳನ್ನು ಹಾಗೂ ಬಸದಿಗಳನ್ನು ಕಟ್ಟಿಸಿದನು. ಈತನು ಸರ್ವಧರ್ಮಸಹಿಷ್ಣು ಆಗಿದ್ದು ಶೈವ, ವೈಷ್ಣವ ಮತ್ತು ಜೈನ ದೇವಾಲಯಗಳನ್ನು ಕಟ್ಟಿಸಿದನು.[19] ಮೂರನೆ ನರಸಿಂಹನ ಮಗನಾದ ಮೂರನೇ ಬಲ್ಲಾಳನು ಕ್ರಿ.ಶ.1291ರಲ್ಲಿ ಹೊಯ್ಸಳ ಸಾಮ್ರಾಜ್ಯದ ಅಧಿಕಾರದ ಚುಕ್ಕಾಣಿ ಹಿಡಿದನು. ಆ ಕಾಲದಲ್ಲಿ ಸುತ್ತ ಮುತ್ತಲಿನ ನೆರೆ ರಾಜರು ಕ್ರಮೇಣವಾಗಿ ಬಲಿಷ್ಠರಾಗಿ ಬೆಳೆಯತೊಡಗಿದ್ದರು. ದೇವಗಿರಿಯ ಸೇವುಣ ದೊರೆ ರಾಮಚಂದ್ರನು ಹೊಯ್ಸಳ ಬಲ್ಲಾಳನ ಮೇಲೆ ಯುದ್ಧ ಸಾರಿದನು. ಇಬ್ಬರಿಗೂ ನಡೆದ ಯುದ್ಧದಲ್ಲಿ ಅಪಾರ ಹಾನಿಗಳಾದವು. ಕೊನೆಗೂ ರಾಮಚಂದ್ರನು ಸೋಲನ್ನೊಪ್ಪಿಕೊಂಡನು. ಇಂತಹ ಪರಿಸ್ಥಿತಿಯಲ್ಲಿ ಭಾರತಾದ್ಯಂತ ರಾಜಕೀಯ ಸಂದಿಗ್ದ ಪರಿಸ್ಥಿತಿ ಉಂಟಾಗಿತ್ತು ಅದೆಂದರೆ ರಾಜಕೀಯವಾಗಿ ಹಲವಾರು ವಿದೇಶಿ ರಾಜರು ಭಾರತದಲ್ಲಿ ಬುನಾದಿ ಹಾಕಲು ಪ್ರಾರಂಭಿಸಿದ ಕಾಲವಾಗಿತ್ತು. ಉತ್ತರ ಭಾರತದಲ್ಲಿ ಮುಸ್ಲಿಂ ದೊರೆಗಳು ಪ್ರಬಲರಾಗುತ್ತಿದ್ದರು. ದಕ್ಷಿಣದಲ್ಲಿ ಎಲ್ಲ ಹಿಂದೂ ರಾಜಮನೆತನಗಳು ಅಂತರಿಕ ಕಲಹಗಳಲ್ಲಿ ತೊಡಗಿದ್ದವು. ಇದರಿಂದ ಪ್ರಭಾವಿತರಾದ ಖಿಲ್ಜಿ ಮನೆತನದ ಅರಸು ಅಲ್ಲಾವುದ್ದೀನ್ ಖಿಲ್ಜಿಯು ದಕ್ಷಿಣ ಭಾರತದ ಸಂಪತ್ತನ್ನು ಲೂಟಿ ಮಾಡಲು ಯೋಚಿಸಿದನು. ಅದರಲ್ಲೂ ಹೊಯ್ಸಳರ ಸಂಪದ್ಭರಿತ ರಾಜ್ಯ ಅವನ ಗಮನಸೆಳೆಯಿತು. ಮೊದಲಿಗೆ ಬಲ್ಲಾಳನೆ ಖಿಲ್ಜಿಯ ಜೊತೆ ರಾಜಿಮಾಡಿಕೊಂಡು ಧನ ಕನಕಗಳನ್ನು ನೀಡಿದನು. ದಕ್ಷಿಣ ಭಾರತದ

ರಾಜರನ್ನು ಒಂದುಗೂಡಿಸಿ ಮುಸ್ಲಿಂ ಆಕ್ರಮಣಕಾರರ ವಿರುದ್ಧ ಹೋರಾಡಬೇಕೆಂಬ ಅವನ ಉದ್ದೇಶ ಸ್ಥಳೀಯ ರಾಜರ ದ್ವೇಷಾಸೂಯೆಗಳೇ ಕಾರಣವಾಗಿ ಅದು ಫಲಿಸಲಿಲ್ಲ. ಇದು ಅವನ ವಿಫಲ ಹೋರಾಟಕ್ಕೆ ಪ್ರಮುಖ ಕಾರಣವಾಯಿತು. ತನ್ನ ರಾಜ್ಯ ಮತ್ತು ಜನತೆಯನ್ನು ಪರಕೀಯರ ದಬ್ಬಾಳಿಕೆ ಮತ್ತು ಹಿಂಸೆಗಳಿಂದ ರಕ್ಷಿಸಲು ಇವನು ನಡೆಸಿದ ಹೋರಾಟ ಅನುಪಮ. ಆದರೆ ಇವನ ಹೋರಾಟ ಅತಿಶಯವಾಗಿದ್ದರೂ ಇವನು ತನ್ನ ಗುರಿಸಾಧನೆಯಲ್ಲಿ ಯಶಸ್ವಿಯಾಗದೆ ಹೋದದು ಒಂದು ದುರಂತ. ಹೊಯ್ಸಳರ ನಂತರದಲ್ಲಿ ಪ್ರವರ್ಧಮಾನಕ್ಕೆ ಬರುತ್ತಿದ್ದ ವಿಜಯನಗರದ ಅರಸರು ಕ್ರಮೇಣ ಹೊಯ್ಸಳರ ಕೇಂದ್ರ ಸ್ಥಾನಗಳ ಮೇಲೆ ತಮ್ಮ ಹತೋಟಿಯನ್ನು ಸ್ಥಾಪಿಸುವುದರೊಂದಿಗೆ ಹೊಯ್ಸಳ ರಾಜಮನೆತನ ಇತಿಹಾಸದಲ್ಲಿ ಮರೆಯಾಗಿ ಹೋಯಿತು.

**<u>ಆಕರ ಗ್ರಂಥಗಳು</u>**


1. ಸುವರ್ಣ ಮಂಡ್ಯ – ದೆ.ಜೆ.ಗೌ. ಪು.26
2. ಕೊಹೆಲೋ ವಿಲಿಯಂ – ದ ಹೊಯ್ಸಳ ವಂಶ, ಪು.12
3. ಕರ್ನಾಟಕದ ಇತಿಹಾಸ – ಪ್ರೊ.ಎಚ್. ರಾಮಲಿಂಗಪ್ಪ, ಪು.105
4. ಬಿ.ಎನ್. ಕೃಷ್ಣಸ್ವಾಮಿ ಅಯ್ಯಂಗಾರ್ – ಆರಿಜನ್ ಆಫ್ ದಿ ಹೊಯ್ಸಳಾಸ್ ಇನ್ ಹೊಯ್ಸಳ ಡೈನೆಸ್ಟಿ, ಪು.38–55
5. ಎ.ಕ.ಸಂ–11, ಚಿ.ಮ – 14,15,16,73
6. ಎ.ಕ.ಸಂ–11, ಚಿ.ಮ –15
7. ಎ.ಕ.ಸಂ–11, ಚಿ.ಮ –16
8. ಕರ್ನಾಟಕದ ಇತಿಹಾಸ – ಪ್ರೊ.ಎಚ್.ರಾಮಲಿಂಗಪ್ಪ, ಪು.106
9. ಎ.ಕ.ಸಂ–4, ಪ್ರಸ್ತಾವನೆ
10. ಎ.ಕ.ಸಂ – 4, ತಿ.ನ – 151
11. ಎ.ಕ.ಸಂ–5, ಬೇಲೂರು–24
12. ಎ.ಕ.ಸಂಪುಟ–6, ನಾ.ಮ – 83
13. ಎ.ಕ.ಸಂ–5, ಬೇಲೂರು– 24
14. ಕರ್ನಾಟಕದ ಸಂಕ್ಷಿಪ್ತ ಚರಿತ್ರೆ – ಜಿ.ಆರ್.ರಂಗಸ್ವಾಮಯ್ಯ, ಪು.157
15. ಡೆರೆಟ್ – ದ ಹೊಯ್ಸಳಾಸ್, ಪೂರ್ವೋಕ್ತ

# ಅಧ್ಯಾಯ – 3

## ಹೊಯ್ಸಳ ದೇವಾಲಯಗಳ ಪ್ರಮುಖ ಲಕ್ಷಣಗಳು

ಭಾರತದ ವಾಸ್ತು ಮತ್ತು ಶಿಲ್ಪ ಕಲೆಯಲ್ಲಿ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳು ಮತ್ತು ಬಸದಿಗಳು ತಮ್ಮದೇ ಆದಂತಹ ವಿಶಿಷ್ಠ ಸ್ಥಾನವನ್ನು ಪಡೆದಿವೆ. ಇವರು ದಕ್ಷಿಣ ಕರ್ನಾಟಕದಲ್ಲಿ ಕ್ರಿ.ಶ. 11ನೇಯ ಶತಮಾನದಿಂದ 14ನೇಯ ಶತಮಾನದ ಮಧ್ಯಭಾಗದವರೆಗೂ ಆಡಳಿತ ನಡೆಸಿದರು. ಈ ಸಮಯದಲ್ಲಿ ಅನೇಕ ದೇವಾಲಯಗಳನ್ನು ಮತ್ತು ಬಸದಿಗಳನ್ನು ನಿರ್ಮಿಸಿದರು. ಈ ವಂಶದ ಎಲ್ಲಾ ರಾಜರುಗಳು ಸಹ ಆಯಾ ಆಡಳಿತ ಕೇಂದ್ರಗಳಲ್ಲಿ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಇವರ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳು ಕರ್ನಾಟಕದ ವಾಸ್ತು ಕಲಾ ಪರಂಪರೆಯಲ್ಲಿ ಬಹಳ ಉಚ್ಛ್ರಾಯಸ್ಥಿತಿಯನ್ನು ತಲುಪಿತು ಎಂದು ಹೇಳಬಹುದು. ಕರ್ನಾಟಕದ ವಾಸ್ತು ಕಲೆಯನ್ನು ಮೊದಲು ಪ್ರಾರಂಭಿಸಿದವರು ಬಾದಾಮಿ ಚಾಲುಕ್ಯರು ಇವರು ದ್ರಾವಿಡ, ನಾಗರ ವಾಸ್ತುವಿನ ಶೈಲಿಗಳು ಬಹಳ ಉನ್ನತ ಮಟ್ಟಕ್ಕೆ ಏರಿದವು. ಇವರ ಕಾಲದಲ್ಲಿಯೇ ಗಜಪ್ರಷ್ಠಾಕೃತಿಯ ತಳವಿನ್ಯಾಸದ ಬಳಕೆ, ಜಾಲಂಧ್ರಗಳು, ಒಳಪ್ರದಕ್ಷಿಣ ಪಥ ಮತ್ತು ಕಟ್ಟಡ ಶೈಲಿಯ ತ್ರಿಕೂಟ ದೇವಾಲಯಗಳು ನಿರ್ಮಾಣವಾದವು.[1] ಬಾದಾಮಿಯಲ್ಲಿನ ಜಂಬುಲಿಂಗ ದೇವಾಲಯವೇ (ಬ್ರಹ್ಮ-ವಿಷ್ಣು-ಮಹೇಶ್ವರರನ್ನು ಇಲ್ಲಿ ಪ್ರತಿಷ್ಠಾಪಿಸಿದ್ದಾರೆ) ಇಡಿ ದಕ್ಷಿಣ ಭಾರತದಲ್ಲಿಯೇ ಪ್ರಥಮ ತ್ರಿಕೂಟ ಶೈಲಿಯ ದೇವಾಲಯವಾಗಿದೆ. ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದಲ್ಲಿ ಪರಿಪೂರ್ಣವಾದ ದ್ರಾವಿಡ ಮಾದರಿಯ ಶೈಲಿಯನ್ನು ನೋಡಬಹುದು. ಶಿಖರದ ತಲಗಳು, ಕೋಷ್ಟಗಳು, ಶುಕನಾಸ ಮತ್ತು ವಿಮಾನದ ಚಿತ್ರಣಗಳು ಇಲ್ಲಿ ದೊರೆಯುತ್ತವೆ. ಈ ಎಲ್ಲ ಲಕ್ಷಣಗಳನ್ನು ರಾಷ್ಟ್ರಕೂಟರಲ್ಲಿ ಹಾಗೂ ಚಾಲುಕ್ಯರಲ್ಲಿ ನಂತರದ ಕಲ್ಯಾಣದ ಚಾಲುಕ್ಯರ ನಂತರದ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳಲ್ಲಿ ಈ ಲಕ್ಷಣಗಳು ಕಂಡುಬರುತ್ತವೆ. ರಾಷ್ಟ್ರಕೂಟರ ದೇವಾಲಯಗಳಲ್ಲಿ ಬಾದಾಮಿ ಚಾಲುಕ್ಯರ ದೇವಾಲಯಗಳಿಗಿಂತ ಹೆಚ್ಚಿನ ಬದಲಾವಣೆ ಕಂಡುಬರದೆ ಇದ್ದರೂ ಸಹ ಇವರ ಕಾಲದಲ್ಲಿ ತ್ರಿಕೂಟದ ಅಥವಾ ಹೆಚ್ಚು ಗರ್ಭಗೃಹಗಳಿರುವ ದೇವಾಲಯಗಳ ನಿರ್ಮಾಣಕ್ಕೆ ಹೊಸ ಆಯಾಮ ದೊರಕಿತು.

ಹೊಯ್ಸಳರ ವಾಸ್ತುಕೃತಿಗೆ ಹೆಚ್ಚು ಪ್ರಭಾವವನ್ನು ಬೀರಿದ್ದು ಕಲ್ಯಾಣದ ಚಾಲುಕ್ಯರ ಕಾಲದ ವಾಸ್ತುಕಲೆ ಎಂಬುದು ಅತ್ಯಂತ ಸ್ಪಷ್ಟವಾದ ಮಾತಾಗಿದೆ. ಚಾಲುಕ್ಯ ಶೈಲಿಯ ಮುಂದಿನ ಬೆಳವಣಿಗೆಯೇ ಹೊಯ್ಸಳ ಶೈಲಿಯಲ್ಲಿ ಪರ್ಯಾವಸನಗೊಂಡಿದೆ. ಕಸಿನ್ಸ್‌ರವರು ಹೊಯ್ಸಳ ಶೈಲಿಯೆಂಬ ಪ್ರತ್ಯೇಕ ಶೈಲಿಯೆಂದು ಪರಿಗಣಿಸದೆ ಹೊಯ್ಸಳ ದೇವಾಲಯಗಳನ್ನೆಲ್ಲಾ ಚಾಲುಕ್ಯ

## ಅಧ್ಯಾಯ – 3

# ಹೊಯ್ಸಳ ದೇವಾಲಯಗಳ ಪ್ರಮುಖ ಲಕ್ಷಣಗಳು

ಭಾರತದ ವಾಸ್ತು ಮತ್ತು ಶಿಲ್ಪ ಕಲೆಯಲ್ಲಿ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳು ಮತ್ತು ಬಸದಿಗಳು ತಮ್ಮದೇ ಆದಂತಹ ವಿಶಿಷ್ಟ ಸ್ಥಾನವನ್ನು ಪಡೆದಿವೆ. ಇವರು ದಕ್ಷಿಣ ಕರ್ನಾಟಕದಲ್ಲಿ ಕ್ರಿ.ಶ. 11ನೇಯ ಶತಮಾನದಿಂದ 14ನೇಯ ಶತಮಾನದ ಮಧ್ಯಭಾಗದವರೆಗೂ ಆಡಳಿತ ನಡೆಸಿದರು. ಈ ಸಮಯದಲ್ಲಿ ಅನೇಕ ದೇವಾಲಯಗಳನ್ನು ಮತ್ತು ಬಸದಿಗಳನ್ನು ನಿರ್ಮಿಸಿದರು. ಈ ವಂಶದ ಎಲ್ಲಾ ರಾಜರುಗಳು ಸಹ ಆಯಾ ಆಡಳಿತ ಕೇಂದ್ರಗಳಲ್ಲಿ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಇವರ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳು ಕರ್ನಾಟಕದ ವಾಸ್ತು ಕಲಾ ಪರಂಪರೆಯಲ್ಲಿ ಬಹಳ ಉಚ್ಛ್ರಾಯಸ್ಥಿತಿಯನ್ನು ತಲುಪಿತು ಎಂದು ಹೇಳಬಹುದು. ಕರ್ನಾಟಕದ ವಾಸ್ತು ಕಲೆಯನ್ನು ಮೊದಲು ಪ್ರಾರಂಭಿಸಿದವರು ಬಾದಾಮಿ ಚಾಲುಕ್ಯರು ಇವರು ದ್ರಾವಿಡ, ನಾಗರ ವಾಸ್ತುವಿನ ಶೈಲಿಗಳು ಬಹಳ ಉನ್ನತ ಮಟ್ಟಕ್ಕೆ ಏರಿದವು. ಇವರ ಕಾಲದಲ್ಲಿಯೇ ಗಜಪ್ರಷ್ಠಾಕೃತಿಯ ತಳವಿನ್ಯಾಸದ ಬಳಕೆ, ಜಾಲಂಧ್ರಗಳು, ಒಳಪ್ರದಕ್ಷಿಣ ಪಥ ಮತ್ತು ಕಟ್ಟಡ ಶೈಲಿಯ ತ್ರಿಕೂಟ ದೇವಾಲಯಗಳು ನಿರ್ಮಾಣವಾದವು.[1] ಬಾದಾಮಿಯಲ್ಲಿನ ಜಂಬುಲಿಂಗ ದೇವಾಲಯವೇ (ಬ್ರಹ್ಮ-ವಿಷ್ಣು-ಮಹೇಶ್ವರರನ್ನು ಇಲ್ಲಿ ಪ್ರತಿಷ್ಠಾಪಿಸಿದ್ದಾರೆ) ಇಡಿ ದಕ್ಷಿಣ ಭಾರತದಲ್ಲಿಯೇ ಪ್ರಥಮ ತ್ರಿಕೂಟ ಶೈಲಿಯ ದೇವಾಲಯವಾಗಿದೆ. ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದಲ್ಲಿ ಪರಿಪೂರ್ಣವಾದ ದ್ರಾವಿಡ ಮಾದರಿಯ ಶೈಲಿಯನ್ನು ನೋಡಬಹುದು. ಶಿಖರದ ತಲಗಳು, ಕೋಷ್ಟಗಳು, ಶುಕನಾಸ ಮತ್ತು ವಿಮಾನದ ಚಿತ್ರಣಗಳು ಇಲ್ಲಿ ದೊರೆಯುತ್ತವೆ. ಈ ಎಲ್ಲ ಲಕ್ಷಣಗಳನ್ನು ರಾಷ್ಟ್ರಕೂಟರಲ್ಲಿ ಹಾಗೂ ಚಾಲುಕ್ಯರಲ್ಲಿ ನಂತರದ ಕಲ್ಯಾಣದ ಚಾಲುಕ್ಯರ ನಂತರದ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳಲ್ಲಿ ಈ ಲಕ್ಷಣಗಳು ಕಂಡುಬರುತ್ತವೆ. ರಾಷ್ಟ್ರಕೂಟರ ದೇವಾಲಯಗಳಲ್ಲಿ ಬಾದಾಮಿ ಚಾಲುಕ್ಯರ ದೇವಾಲಯಗಳಗಿಂತ ಹೆಚ್ಚಿನ ಬದಲಾವಣೆ ಕಂಡುಬರದೆ ಇದ್ದರೂ ಸಹ ಇವರ ಕಾಲದಲ್ಲಿ ತ್ರಿಕೂಟದ ಅಥವಾ ಹೆಚ್ಚು ಗರ್ಭಗೃಹಗಳಿರುವ ದೇವಾಲಯಗಳ ನಿರ್ಮಾಣಕ್ಕೆ ಹೊಸ ಆಯಾಮ ದೊರಕಿತು.

ಹೊಯ್ಸಳರ ವಾಸ್ತುಕೃತಿಗೆ ಹೆಚ್ಚು ಪ್ರಭಾವವನ್ನು ಬೀರಿದ್ದು ಕಲ್ಯಾಣದ ಚಾಲುಕ್ಯರ ಕಾಲದ ವಾಸ್ತುಕಲೆ ಎಂಬುದು ಅತ್ಯಂತ ಸ್ಪಷ್ಟವಾದ ಮಾತಾಗಿದೆ. ಚಾಲುಕ್ಯ ಶೈಲಿಯ ಮುಂದಿನ ಬೆಳವಣಿಗೆಯೇ ಹೊಯ್ಸಳ ಶೈಲಿಯಲ್ಲಿ ಪರ್ಯಾವಸನಗೊಂಡಿದೆ. ಕಸಿನ್ಸ್‌ರವರು ಹೊಯ್ಸಳ ಶೈಲಿಯೆಂಬ ಪ್ರತ್ಯೇಕ ಶೈಲಿಯೆಂದು ಪರಿಗಣಿಸದೆ ಹೊಯ್ಸಳ ದೇವಾಲಯಗಳನ್ನೆಲ್ಲಾ ಚಾಲುಕ್ಯ

ಶೈಲಿಯಲ್ಲಿಯೇ ಸೇರಿಸಿಬಿಟ್ಟಿದ್ದಾರೆ.[2] ಆದರೆ ಚಾಲುಕ್ಯಶೈಲಿಗಿಂತ ಕೆಲವು ವಿಶಿಷ್ಟ ಅಂಶಗಳನ್ನು ಹೊಯ್ಸಳ ವಾಸ್ತು ಶಿಲ್ಪಗಳಲ್ಲಿ ಕಾಣಬಹುದಾಗಿದೆ. ಆದುದರಿಂದ 'ಹೊಯ್ಸಳ ವಾಸ್ತುಶಿಲ್ಪ' ಎಂಬ ಒಂದು ಪ್ರತ್ಯೇಕವಾದ ಶೀರ್ಷಿಕೆಯ ಅವಶ್ಯಕತೆ ಇದೆ. ಕಲ್ಯಾಣ ಚಾಲುಕ್ಯರ ಕಾಲಕ್ಕಾಗಲೆ ಗ್ರಾನೈಟ್ ಮತ್ತು ಮರಳು ಶಿಲೆಯಲ್ಲಿ ವಾಸ್ತುಕೃತಿಗಳಲ್ಲಿ ಪಕ್ವವಾದ ಅಂಶಗಳು ಉದಯಿಸಿದವು. ದುಂಡಾದ ನುಣುಪಾದ ಹೊಳೆಯುವ ಕಂಬಗಳು, ಕುಶನ್ ಅಥವಾ ಪಲಗೈ ಬೋದಿಗೆಗಳು, ಒಳಮಾಳಿಗೆಯ ಭುವನೇಶ್ವರಿಯಲ್ಲಿನ ಶಿಲ್ಪ ರಚನೆಗಳು ಕಂಡುಬಂದಿವೆ. ಇವಲ್ಲದೆ ದೇವಾಲಯಗಳ ಒಳ ಮತ್ತು ಹೊರವಿನ್ಯಾಸಗಳಲ್ಲಿ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿಯೆ ಶಿಲ್ಪಗಳ ಅಲಂಕರಣೆ ಹಾಗು ಚೌಕಾಕಾರ, ಹಿನ್‌ಸರಿತ ಮತ್ತು ಮುನ್‌ಸರಿತಗಳುಳ್ಳ ಬಾಹ್ಯ ವಿನ್ಯಾಸ, ಕೋಷ್ಠಗಳ ಮತ್ತು ಭಿತ್ತಿಯ ಸ್ಪಷ್ಟವಾದ ಬೆಳವಣಿಗೆ ಮತ್ತು ವಿವಿಧ ಮಾದರಿಯ ಶಿಖರಗಳು ಹೀಗೆ ಕಲ್ಯಾಣ ಚಾಲುಕ್ಯ ಮತ್ತು ಬಾದಾಮಿ ಚಾಲುಕ್ಯರ ಸರಳವಾದ ವಾಸ್ತು ರಚನೆಯೊಂದಿಗೆ ಪ್ರಾರಂಭಗೊಂಡು ಕಾಲಾನುಘಟ್ಟದಲ್ಲಿ ಇವು ಉತ್ತುಂಗಕ್ಕೆ ಸೇರಿದವು. ಮತ್ತೊಂದು ಗಮನಾರ್ಹ ವಿಷಯವೆಂದರೆ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳಲ್ಲಿ ವಾಸ್ತುವಿನ ಮತ್ತು ಶಿಲ್ಪಗಳ ಕೆತ್ತನೆ ಕೆಲಸ ಮಾಡಿದಂತಹ ಶಿಲ್ಪಿಗಳು ಹೊಯ್ಸಳರ ಆಶ್ರಯದಲ್ಲಿ ಕೆಲಸ ಮಾಡಿದ್ದಾರೆ. ಇವರ ಪರಿಶ್ರಮದಿಂದಲೆ ಹೊಯ್ಸಳರ ಕಲೆಯಲ್ಲಿ ಗಾಢವಾದ ಪ್ರಭಾವ ಬೇರೂರಲು ಸಾಧ್ಯವಾದಂತೆ ತೋರುತ್ತದೆ. ಈ ಶಿಲ್ಪಿಗಳು ದ್ರಾವಿಡ ಮತ್ತು ನಾಗರ ಶಿಖರಗಳ ವಾಸ್ತು ಅಂಶಗಳನ್ನು ಉಪಯೋಗಿಸಿಕೊಂಡು ಹೊಯ್ಸಳರದೆ ಆದ ಹೊಸದಾದ ವೇಸರ ಶೈಲಿಯು ಬೆಳೆಯಿತು.

ಹೊಯ್ಸಳ ವಂಶಸ್ಥರು ಕಲೆ ಮತ್ತು ಸಾಂಸ್ಕೃತಿಕ ರಂಗಕ್ಕೆ ಹೆಚ್ಚು ಗಮನಕೊಟ್ಟಿದ್ದರು. ಆದುದರಿಂದಲೇ ಇವರು ಆಡಳಿತ ನಡೆಸಿದ ಪ್ರದೇಶಗಳೆಲ್ಲಾ ಕಡೆಯಲ್ಲೂ ಹೊಯ್ಸಳ ದೇವಾಲಯಗಳು ನಿರ್ಮಾಣವಾದವು. ಇವರು ಸರ್ವಧರ್ಮ ಸಹಿಷ್ಣುಗಳಾಗಿದುದರಿಂದಲೆ ಶೈವ, ವೈಷ್ಣವ ಮತ್ತು ಜೈನ ದೇವಾಲಯಗಳು ಏಕಕಾಲದಲ್ಲಿ ನಿರ್ಮಾಣವಾಗುವಂತೆ ನೋಡಿಕೊಂಡರು. ಎಲ್ಲರಿಗೂ ಸಾಮಾಜಿಕ ಹಾಗೂ ಧಾರ್ಮಿಕ ನ್ಯಾಯಗಳನ್ನು ಇವರ ಕಾಲದಲ್ಲಿ ದೊರಕಿಸಿಕೊಟ್ಟರು. ಇವರ ಕಾಲದಲ್ಲಿ ಕೇವಲ ರಾಜರೇ ದೇವಾಲಯಗಳನ್ನು ನಿರ್ಮಾಣಮಾಡಲು ಕಾರಣಕರ್ತರಾಗಲಿಲ್ಲ, ಇವರ ಜೊತೆ ಇವರ ರಾಣಿಯರು, ಸಾಮಂತರು ಹಾಗೂ ದಂಡನಾಯಕರು ಹಾಗೂ ಅಧಿಕಾರಿಗಳು ಮತ್ತು ಕೆಲವೊಮ್ಮೆ ಗ್ರಾಮದ ಮಹಾಜನಗಳು ಕೂಡ ದೇವಾಲಯಗಳನ್ನು ಮತ್ತು ಬಸದಿಗಳನ್ನು ನಿರ್ಮಿಸಿದರೆಂದು ಇವರ ಕಾಲದ ಶಾಸನಗಳಿಂದ ತಿಳಿಯಬಹುದು. ಆದುದರಿಂದಲೇ ಹೊಯ್ಸಳರ ಕಾಲದಲ್ಲಿ ಅವರ ಆಡಳಿತ ಕೇಂದ್ರವಾದ ರಾಜಧಾನಿಯ ಸುತ್ತಲೂ

ಕೇಂದ್ರೀಕೃತವಾಗಿರದೆ ಅವರ ಆಡಳಿತದ ಭೌಗೋಳಿಕ ವ್ಯಾಪ್ತಿಯಲ್ಲಿ ಎಲ್ಲೆಡೆಯಲ್ಲಿ ನಿರ್ಮಾಣವಾದವು. ಇವುಗಳು ಆಯಾ ಪರಿಸರದಲ್ಲಿನ ಸ್ಥಳೀಯ ಕಲಾಸಂವೇದನೆಗಳಿಗೆ ಹೊಂದಿಕೊಂಡು ವಾಸ್ತು ಕೃತಿಗಳು ಬೆಳವಣಿಗೆಯಾದವು. ನಂತರದಲ್ಲಿ ರಾಜಪರಿವಾರದವರು ದೇವಾಲಯಗಳ ಅಭಿವೃದ್ಧಿಗೆ ದಾನದತ್ತಿಗಳನ್ನು ನೀಡಿದ ವಿವರವುಳ್ಳ ಹಲವಾರು ಶಾಸನಗಳು ದೊರೆಯುತ್ತವೆ.

ಹೊಯ್ಸಳರ ಕಾಲದ ದೇವಾಲಯಗಳಲ್ಲಿ ನಾವು ಕೆಲವು ಪ್ರಮುಖವಾದ ಅಂಶಗಳನ್ನು ನೋಡಬಹುದು. ಇವುಗಳಲ್ಲಿ ಜಗತಿ, ನಕ್ಷತ್ರಾಕಾರದ ತಳವಿನ್ಯಾಸ, ಗರ್ಭಗೃಹಗಳ ಸಂಖ್ಯೆ (ಏಕಕೂಟ, ದ್ವಿಕೂಟ, ತ್ರಿಕೂಟ, ಚತುಷ್ಕೂಟ ಮತ್ತು ಪಂಚಕೂಟ), ಭಿತ್ತಿ ಶಿಲ್ಪಗಳು, ವೇಸರ ಶೈಲಿಯ ಶಿಖರಗಳು ಮತ್ತು ಕಂಬಗಳ ನಿರ್ಮಾಣದಲ್ಲಿ ಕಂಡುಬರುವ ಕುಶಲತೆ ಹೀಗೆ ವಾಸ್ತುವಿನಲ್ಲಿ ಹಾಗೂ ಶಿಲ್ಪ ಕಲಾಕೃತಿಯಲ್ಲಿ ಹತ್ತು ಹಲವಾರು ಬದಲಾವಣೆಗಳೊಂದಿಗೆ ವಿಶೇಷತೆಯನ್ನು ನೋಡಬಹುದು. ಕಲಾಕೃತಿಗಳಲ್ಲಿ ಇಷ್ಟೊಂದು ವಿಶೇಷತೆ ಕಂಡುಬರಲು ಅವರು ಬಳಸಿದ ಮಾಧ್ಯಮವೆಂದೇ ಹೇಳಬಹುದು. ಇವರು ತಿಳಿನೀಲಿ ಮಿಶ್ರಿತ ಕಪ್ಪು ಸೋಪುಗಲ್ಲನ್ನು ಹೆಚ್ಚಿನ ಸಂಖ್ಯೆಯಲ್ಲಿ ದೇವಾಲಯಗಳ ನಿರ್ಮಾಣಕ್ಕೆ ಬಳಸಿರುವುದರಿಂದ ಇವರ ಕಲಾಕೃತಿ ಇಷ್ಟೊಂದು ಉತ್ತುಂಗಕ್ಕೇರಲು ಸಾಧ್ಯವಾಯಿತು.[3] ಈ ಕಲ್ಲು ವಿಶೇಷ ಗುಣವುಳ್ಳದಾಗಿದೆ ಅದೆಂದರೆ ಇದು ಭೂಮಿಯೊಳಗೆ ಇರುವಾಗ ಬಹಳ ಮೃದುವಾಗಿದ್ದು ಅದನ್ನು ಹೊರತೆಗೆದಾಗ ವಾತಾವರಣಕ್ಕೆ ಅನುಗುಣವಾಗಿ ಗಡಸಾಗುವುದು ಇದರ ಲಕ್ಷಣ, ಹಾಗು ಇದು ಸಣ್ಣ ಕಣಗಳಿಂದ ರಚಿತವಾಗಿರುವುದರಿಂದ ಇದು ಹೆಚ್ಚು ಹೆಚ್ಚು ಹೊಳಪನ್ನು ನೀಡಲೂ ಸಾಧ್ಯವಾಗುವಂತಹ ಲಕ್ಷಣಗಳನ್ನು ಹೊಂದಿದೆ. ಇವರ ಅದ್ಭುತ ಕಲಾಕೃತಿಗೆ ಹೆಸರುವಾಸಿಯಾದ ಬೇಲೂರು, ಹಳೇಬೀಡು, ಸೋಮನಾಥಪುರ ದೇವಾಲಯಗಳೇ ಇದಕ್ಕೆ ಸಾಕ್ಷಿಯಾಗಿವೆ. ಇವರ ಕಾಲದ ದೇವಾಲಯಗಳೆಲ್ಲವೂ ಸಹ ಮುಖ್ಯವಾಗಿ ಬಳಪದಕಲ್ಲನ್ನು ಉಪಯೋಗಿಸಿರುವುದು ಎಲ್ಲೆಡೆ ಕಂಡು ಬಂದರೂ ಗ್ರಾನೈಟ್ ಶಿಲೆಯನ್ನು ಇವರು ಬಳಸಿಲ್ಲ ಎಂದರ್ಥವಲ್ಲ. ಇವರು ಕೂಡ ಕೆಲವು ದೇವಾಲಯಗಳನ್ನು ಗ್ರಾನೈಟ್ ಶಿಲೆಯಿಂದ ನಿರ್ಮಿಸಿದ್ದಾರೆ. ಉದಾಹರಣೆಗೆ ತಲಕಾಡಿನ ಕೀರ್ತಿನಾರಾಯಣ ದೇವಾಲಯ ಮತ್ತು ಗೋವಿಂದನಹಳ್ಳಿಯ ಪಂಚಲಿಂಗೇಶ್ವರ ದೇವಾಲಯ ಇನ್ನೂ ಮುಂತಾದ ಅನೇಕ ದೇವಾಲಯಗಳು ಕಣಶಿಲೆಯಲ್ಲಿಯೇ ನಿರ್ಮಾಣವಾಗಿವೆ. ಬಳಪದ ಕಲ್ಲಿನ ಉಪಯೋಗ ಪ್ರಾರಂಭವಾದಾಗ ಪ್ರಾಯಶಃ ಆ ಶಿಲೆಯಲ್ಲಿ ಕಲಾವಿದ ಕುಸುರಿನಿಂದ ಕೂಡಿದ ಕೆತ್ತನೆ ಮಾಡಲು ಪ್ರಾರಂಭಿಸಿರಬೇಕೆಂದು ತೋರುತ್ತದೆ.

**ತಳವಿನ್ಯಾಸ**

ದೇವಾಲಯಗಳ ತಳ ವಿನ್ಯಾಸವು ಸಾಮಾನ್ಯವಾಗಿ ಬಹುಕೋನಾಕಾರವಾಗಿವೆ ಅಂದರೆ ನಕ್ಷತ್ರಾಕಾರವಾಗಿರುತ್ತದೆ. ಇದನ್ನು ಅಧಿಷ್ಠಾನದಿಂದ ಶಿಖರದವರೆಗೂ ಕಾಣಬಹುದು. ನಕ್ಷತ್ರಾಕಾರದ ಜೊತೆಗೆ ಚತುರಸ್ರ ಮತ್ತು ದೀರ್ಘ ಚತುರಸ್ರ ಅಥವಾ ಅಷ್ಟಮುಖ ತಳವಿನ್ಯಾಸಗಳಿರುವ ದೇವಾಲಯಗಳು ಇವೆ. ಕಿಕ್ಕೇರಿಯ ದೇವಾಲಯದ ತಳವಿನ್ಯಾಸವು 'ಆಮೆ' ದೇಹದ ರಚನೆಯಿರುವಂತೆ ಇದೆ.[4]

**ಜಗತಿ**

ನಕ್ಷತ್ರಾಕಾರದ ತಲವಿನ್ಯಾಸವನ್ನೇ ಅನುಸರಿಸಿ ಅದೆ ಆಕಾರದಲ್ಲಿ ಎತ್ತರವಾದ ಹಾಗೂ ವಿಶಾಲವಾದ ಜಗತಿಯನ್ನು ಹೊಂದಿರುತ್ತದೆ. ಇದರ ಮೇಲೆ ದೇವಾಲಯಗಳ ರಚನೆಯಾಗಿರುತ್ತದೆ. ಇದು ಹಿಂಬಣಿ ಹಾಗೂ ಮುಂಬಣಿಯಾಗಿರುತ್ತವೆ. ಈ ಜಗತಿಯು ದೇವಾಲಯದ ಸುತ್ತಲೂ ಇದ್ದು ಓಡಾಡುವುದಕ್ಕೆ ಅನುಕೂಲವಾಗಿರುವಷ್ಟು ಅಗಲವಾಗಿರುತ್ತದೆ. ಇದು ದೇವಾಲಯಕ್ಕೆ ಹೊರಪ್ರದಕ್ಷಿಣೆಯಂತೆ ಇರುತ್ತದೆ. ಸಾಮಾನ್ಯವಾಗಿ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳಲ್ಲಿ ಒಳಗೆ ಪ್ರದಕ್ಷಿಣಾಪಥವಿರುವುದಿಲ್ಲ ಆದುದರಿಂದಲೇ ಇದು ದೇವಾಲಯಕ್ಕೆ ಹೊರಗಿನಿಂದ ಪ್ರದಕ್ಷಿಣೆ ಹಾಕಲು ಸಹಕಾರಿಯಾಗುತ್ತದೆ.[5] ಈ ಸುತ್ತು ಜಗುಲಿಯೇ ಪ್ರದಕ್ಷಿಣ ಪಥವೂ ಆಗಿರುವುದರಿಂದ ಒಳಭಾಗದಲ್ಲಿ ಗರ್ಭಗೃಹದ ಸುತ್ತ ಚಾಲುಕ್ಯ ದೇವಾಲಯಗಳಲ್ಲಿರುವಂತೆ ಪ್ರದಕ್ಷಿಣಪಥ ಬಹುಶಃ ಹೊಯ್ಸಳ ದೇವಾಲಯಗಳಲ್ಲಿರುವುದಿಲ್ಲ. ಆದರೆ ಹೊಯ್ಸಳರ ಕಾಲದ ಎಲ್ಲ ದೇವಾಲಯಗಳಲ್ಲಿಯೂ ಸಹ ಈ ರೀತಿಯ ಜಗತಿಯನ್ನು ಕಾಣಲಾಗುವುದಿಲ್ಲ. ಕೆಲವೇ ಕೆಲವು ದೇವಾಲಯಗಳಲ್ಲಿ ಮಾತ್ರ ಜಗತಿಯನ್ನು ಕಾಣಬಹುದು. ಕೆಲವು ಜಗತಿಯ ಮೂಲೆಗಳಲ್ಲಿ ಆನೆಯ ಶಿಲ್ಪಗಳನ್ನು ಕೆತ್ತಿರುತ್ತಾರೆ. ಉದಾಹರಣೆಗೆ ಸೋಮನಾಥಪುರದ ದೇವಾಲಯ ಈ ಶಿಲ್ಪವು ಜಗತಿಯ ಬಲಿಷ್ಠತೆಯನ್ನು ತೋರಿಸುವ ಸಂಕೇತವಾಗಿರುತ್ತದೆ.

**ಅಧಿಷ್ಠಾನ**

ತಳವಿನ್ಯಾಸಕ್ಕೆ ಅನುಗುಣವಾಗಿ ಜಗತಿ ನಿರ್ಮಾಣವಾಗಿರುತ್ತದೆ ಜಗತಿಗೆ ಅನುಗುಣವಾಗಿ ಅಧಿಷ್ಠಾನವು ನಿರ್ಮಾಣವಾಗಿರುತ್ತದೆ. ಇದು ದೇವಾಲಯದ ತಳಭಾಗ,[6] ಇವರ ಕಾಲದ ಅಧಿಷ್ಠಾನದಲ್ಲಿ ಶಿಲ್ಪ ಪಟ್ಟಿಕೆಗಳನ್ನು ಮಾಡಲಾಗಿರುತ್ತದೆ. ಶಿಲ್ಪಪಟ್ಟಿಕೆಗಳಲ್ಲಿ ಆನೆ, ವ್ಯಾಳ, ವ್ಯಾಘ್ರ, ಕುದುರೆ. ಒಂಟೆ, ಹಂಸ, ಲತಾಸುರುಳಿಬಳ್ಳಿಗಳು ಹಾಗೂ ಇನ್ನಿತರ ಪ್ರಾಣಿ ಪಕ್ಷಿಗಳನ್ನು ವಿವಿಧ

ಭಂಗಿಯಲ್ಲಿ ರಚನೆ ಮಾಡಿರುತ್ತಾರೆ. ಇವುಗಳಲ್ಲಿ ಆನೆಗಳು ಮತ್ತು ಕುದುರೆಗಳು ಸಾಲು ಸಾಲಾಗಿ ಉತ್ಸವಕ್ಕೆ ಹೋಗುತ್ತಿರುವಂತೆಯೂ, ಹಾಗೂ ಯುದ್ಧಕ್ಕೆ ಹೋಗುತ್ತಿರುವಂತೆಯೂ ಚಿತ್ರಿಸಲಾಗಿರುತ್ತದೆ. ಇದರ ಮೇಲ್ಭಾಗದಲ್ಲಿ ಸುಮಾರು ಒಂದು ಅಡಿ ಎತ್ತರದ ಮತ್ತೊಂದು ಅಲಂಕರಣ ಪಟ್ಟಿಕೆಯಿದ್ದು ಇವುಗಳಲ್ಲಿ ರಾಮಾಯಣ, ಮಹಾಭಾರತ, ಭಾಗವತ ಮತ್ತು ಪಂಚತಂತ್ರ ಶಿಲ್ಪಗಳನ್ನು ಕೆತ್ತಿರುತ್ತಾರೆ ಕೆಲವು ದೇವಾಲಯಗಳಲ್ಲಿ ಈ ಪಟ್ಟಿಕೆಯು ಭಿತ್ತಿಗೆ ಹೊಂದಿಕೊಂಡಿರುವಂತಿರುತ್ತದೆ. ಅಲಂಕರಣವಿಲ್ಲದ ಅಧಿಷ್ಠಾನದಲ್ಲಿ ಉಪಾನ, ಕಂಪ, ಜಗತಿ, ಪದ್ಮ, ಕಂಪ, ತ್ರಿಪಟ್ಟಕುಮುದ, ಗಳ, ಪಟ್ಟಿಕಾ ಮತ್ತು ದಂತಪಂಕ್ತಿಯನ್ನು ಹೊಂದಿರುತ್ತವೆ. ಕೆಲವು ದೇವಾಲಯದ ಅಧಿಷ್ಠಾನದಲ್ಲಿ ಎರಡು ಹಂತದ ದಂತಪಂಕ್ತಿಯನ್ನು ಮಾಡಲಾಗಿರುತ್ತದೆ. ಕಿಕ್ಕೇರಿಯ ಬ್ರಹ್ಮೇಶ್ವರ ದೇವಾಲಯದ ಅಧಿಷ್ಠಾನದ ದಂತಪಂಕ್ತಿಯ ರೀತಿಯಲ್ಲಿರುವ ಒಂದು ಪಟ್ಟಿಕೆಯಲ್ಲಿ ವ್ಯಾಘ್ರ ಶಿಲ್ಪ, ಅಲ್ಲಲ್ಲಿ ದೇವತೆಗಳ ಶಿಲ್ಪ ಮತ್ತು ಮಿಥುನ ಶಿಲ್ಪಗಳನ್ನು ಚಿತ್ರಿಸಿದ್ದಾರೆ.[7] ಮೇಲೆ ತಿಳಿಸಿರುವ ಅಲಂಕಾರಿಕ ಪಟ್ಟಿಕೆಗಳು ಕೆಲವು ದೇವಾಲಯಗಳಲ್ಲಿ ಭಿತ್ತಿಗೆ ಸೇರಿಕೊಂಡಿರುವಂತೆಯೂ ಇವೆ. ಇವುಗಳ ಅಳತೆ ಪ್ರಮಾಣದಲ್ಲಿ ಗಮನಿಸಿದಾಗ ಇದು ತಿಳಿಯುತ್ತದೆ.

**ಭಿತ್ತಿ**

ಭಿತ್ತಿ ಎಂದರೆ ಗೋಡೆ ಎಂದು ಅರ್ಥ ಸೂಚಿಸುತ್ತದೆ.[8] ಭಿತ್ತಿಯು ಅಧಿಷ್ಠಾನದ ಮೇಲಿಂದ ಪ್ರಾರಂಭವಾಗುತ್ತದೆ. ಭಿತ್ತಿಗಳ ಒಳಭಾಗದಲ್ಲಿ ಅಲಂಕರಣೆಗಳು ಇರುವುದಿಲ್ಲ. ಹೊರಭಾಗದಲ್ಲಿ ಸಣ್ಣದಾದ ಅರೆ ಕಂಭಗಳು, ಕೋಷ್ಟಗಳು, ಅರೆಕಂಭಗಳ ಮಧ್ಯಭಾಗದಲ್ಲಿ ಪದ್ಮದ ರಚನೆಗಳು ಇತ್ಯಾದಿ ಅಲಂಕರಣೆಯಿಂದ ಕೂಡಿರುತ್ತವೆ. ಒಂದೊಂದು ದೇವಾಲಯದ ಹೊರ ಭಿತ್ತಿಯು ಹಿಂಬಣಿ ಹಾಗೂ ಮುಂಬಣಿಯಾದ ರಚನೆಯನ್ನು ಹೊಂದಿರುತ್ತವೆ. ಮತ್ತೆ ಕೆಲವು ಕಡೆ ಸಣ್ಣ ಸಣ್ಣ ಬುರುಜುಗಳನ್ನು ದ್ರಾವಿಡ ಹಾಗೂ ನಾಗರ ಶೈಲಿಯಲ್ಲಿ ಕೆತ್ತಲಾಗಿರುತ್ತದೆ. ಕೆಲವು ಕಡೆಯಲ್ಲಿ ಜಾಲಂದ್ರವನ್ನು ರಚಿಸಿರುತ್ತಾರೆ. ಹೊಯ್ಸಳರ ಕಾಲದ ದೇವಾಲಯದ ಭಿತ್ತಿಯ ಅಲಂಕರಣೆಯಲ್ಲಿ ಬಹಳ ಪ್ರಮುಖವಾದಂತಹ ರಚನೆ ಎಂದರೆ ಭಿತ್ತಿ ಶಿಲ್ಪಗಳು. ಹೊರ ಭಿತ್ತಿಯ ಸುತ್ತಲೂ ದೇವಾಲಯದ ಅಲಂಕರಣೆಯು ಚೆನ್ನಾಗಿ ಕಾಣಲು ದೇವತೆಗಳ ಶಿಲ್ಪಗಳನ್ನು ಕೆತ್ತಿದ್ದಾರೆ. ಈ ಭಾಗದಲ್ಲಿ ಶೈವ, ವೈಷ್ಣವ ಬೇಧಭಾವವಿಲ್ಲದೆ ಎರಡು ಪಂಥದ ದೇವತೆಗಳು ಹಾಗೂ ಅವರ ಅವತಾರ ಶಿಲ್ಪಗಳನ್ನು ಕೆತ್ತಲಾಗಿದೆ. ಇವುಗಳ ಜೊತೆಗೆ ಉಪದೇವತೆಗಳು, ಚಾಮರಧಾರಿಣಿಯರು, ಪರಿಚಾರಕಿಯರು, ವಾಧ್ಯವಾದಕರು, ಡೋಲುಬಾರಿಸುವವರು ಮತ್ತು ನೃತ್ಯಗಾರ್ತಿಯರು ಹೀಗೆ ಹತ್ತು ಹಲವಾರು ಅಲಂಕಾರಿಕ ಶಿಲ್ಪಗಳನ್ನು ಇಲ್ಲಿ ಚಿತ್ರಿಸಿರುತ್ತಾರೆ. ಕೆಲವು ದೇವಾಲಯಗಳಲ್ಲಿ

ಎರಡು ಹಂತದಲ್ಲಿ ಶಿಲ್ಪಗಳನ್ನು ಕೆತ್ತಲಾಗಿರುತ್ತದೆ. ಆದರೆ ಎರಡನೆ ಹಂತದ ಶಿಲ್ಪಗಳು ಕೆಳ ಹಂತದ ಶಿಲ್ಪಗಳಿಗಿಂತ ಚಿಕ್ಕದಾಗಿರುತ್ತವೆ. ಈ ರೀತಿಯ ಲಕ್ಷಣವನ್ನು ನುಗ್ಗೇಹಳ್ಳಿಯ ಲಕ್ಷ್ಮಿನಾರಾಯಣ ಕಿಕ್ಕೇರಿಯ ಬ್ರಹ್ಮೇಶ್ವರ ಮತ್ತು ಜನಾರ್ಧನ ದೇವಾಲಯಗಳಲ್ಲಿ ನೋಡಬಹುದು. ಕೆಲವು ದೇವಾಲಯಗಳ ಭಿತ್ತಿಯಲ್ಲಿ ಕೋಷ್ಟಗಳ ರೂಪದಲ್ಲಿ ರಚನೆಮಾಡಿ ಅದರ ಮಧ್ಯಭಾಗದಲ್ಲಿ ಶಿಲ್ಪಗಳನ್ನು ಚಿತ್ರಿಸಿರುತ್ತಾರೆ. ಈ ರೀತಿಯಲ್ಲಿ ಹೊರಭಿತ್ತಿಯಲ್ಲಿರುವ ಶಿಲ್ಪಗಳು ದೇವಾಲಯದ ಸೌಂದರ್ಯಕ್ಕೆ ಹೆಚ್ಚು ಇಂಬು ನೀಡಿವೆ.

**ಶಿಖರ**

ಶಿಖರಗಳು ದೇವಾಲಯಕ್ಕೆ ಒಂದು ರೀತಿಯ ವಿಶಿಷ್ಠವಾದಂತಹ ಸೌಂದರ್ಯವನ್ನು ನೀಡುತ್ತವೆ. ಇದು ಗರ್ಭಗೃಹದ ಮೇಲ್ಭಾಗದಲ್ಲಿರುವ ಭಾಗವಾಗಿದೆ.[9] ಪ್ರಾರಂಭದಲ್ಲಿ ಇವರು ದ್ರಾವಿಡ ಮಾದರಿಯ ಶಿಖರಗಳನ್ನು ಮಾಡಿದರು. ನಂತರದಲ್ಲಿ ದ್ರಾವಿಡ ಮತ್ತು ನಾಗರ ಶೈಲಿಯ ಮಿಶ್ರಣದ ಪರಿಣಾಮವಾಗಿ 'ವೇಸರ' ಶೈಲಿಯನ್ನು ಬಳಸಿಕೊಂಡರು. ಕೆಲವು ದೇವಾಲಯಗಳಲ್ಲಿ ನಾಗರ ಮಿಶ್ರಿತ ದ್ರಾವಿಡ ಶೈಲಿಯನ್ನು ಕಾಣಬಹುದು. ಹೊಯ್ಸಳರ ದೇವಾಲಯದ ಶಿಖರಗಳಲ್ಲಿ ವಿಶೇಷವಾಗಿ 'ವೇಸರ'ಶೈಲಿಯನ್ನು ನೋಡಬಹುದು. ಭಿತ್ತಿಯ ಮೇಲ್ಭಾಗದಲ್ಲಿ ಒಂದು ಅಥವಾ ಎರಡು ಮೇಲ್ಛಾವಣಿಗಳನ್ನು ಹಾಕಲಾಗಿರುತ್ತದೆ. ಇದೇ ರೀತಿಯಲ್ಲಿ ಒಂದು ಅಥವಾ ಎರಡು ಬಗ್ಗುಗಳಿಂದ ಕೂಡಿದ ಅಲಂಕಾರಿಕ ಕಪೋತವಿರುತ್ತದೆ. ಇದನ್ನು ಮಳೆ ನೀರು ಭಿತ್ತಿಗೆ ಬೀಳದೆ ಹೊರ ಹೋಗಲು ಅನುಕೂಲವಾಗುವಂತೆ ಹಾಕಲಾಗಿರುತ್ತದೆ. ಶಿಖರವು ದೇವಾಲಯದ ಗರ್ಭಗೃಹ ಮತ್ತು ಶುಕನಾಸಿಯ ಕೋನಗಳಿಗೆ ಹೊಂದಿಕೊಂಡಂತೆ ಮೆಟ್ಟಿಲು ಮೆಟ್ಟಿಲುಗಳಾಗಿ ಮೇಲೆ ಹೋದಂತೆಲ್ಲ ಚಿಕ್ಕದಾಗುತ್ತದೆ. ಕೊನೆಯಲ್ಲಿ ಸ್ಥೂಪಿಯಿದ್ದು ಮೇಲ್ಭಾಗದಲ್ಲಿ ಕಳಸವನ್ನು ಚಿತ್ರಿಸಲಾಗಿರುತ್ತದೆ. ಶಿಖರದ ಪ್ರತಿಯೊಂದು ಮೆಟ್ಟಿಲುಗಳಲ್ಲಿ ಪ್ರತಿದಿಕ್ಕಿಗೂ ಅನುಗುಣವಾಗಿ ಭದ್ರಶಾಲಾವನ್ನು ಮಾಡಲಾಗಿರುತ್ತದೆ. ಇಲ್ಲಿ ಶೈವ, ವೈಷ್ಣವ ಮತ್ತು ಶಾಕ್ತದೇವತೆಗಳನ್ನು ಚಿತ್ರಿಸಲಾಗಿರುತ್ತದೆ. ಈ ಶಿಲ್ಪಗಳನ್ನು ದೇವಾಲಯದ ಮುಖ್ಯ ದೇವತೆಗಳಿಗೆ ಅನುಗುಣವಾಗಿ ಚಿತ್ರಿಸಿರುತ್ತಾರೆ. ಭದ್ರಶಾಲಾ ಪಕ್ಕದಲ್ಲಿ ಶಾಲಾಗಳು ಇರುತ್ತವೆ ಇಲ್ಲಿ ಲತಾಸುರುಳಿ ಬಳ್ಳಿಗಳನ್ನು ಕೆತ್ತಲಾಗಿರುತ್ತದೆ. ಕೆಲವು ದೇವಾಲಯದ ಸುತ್ತಲೂ ಒಂದು ಹಂತದ ಭದ್ರಶಾಲಾ ಮತ್ತು ಶಾಲಾಗಳನ್ನು ರಚಿಸಿದ್ದು ಇಲ್ಲಿ ದೇವತೆಗಳ ಉಬ್ಬುಶಿಲ್ಪಗಳು, ರತಿ-ಮನ್ಮಥ, ಸ್ತ್ರೀಯರ ವಿವಿಧ ಭಂಗಿಗಳು ಹೀಗೆ ಹಲವಾರು ಶಿಲ್ಪಗಳನ್ನು ಕೆತ್ತಿರುತ್ತಾರೆ. ಸ್ಥೂಪಿಯ ಕೆಳಭಾಗದ ಪಟ್ಟಿಕೆಯ ನಾಲ್ಕು ಮೂಲೆಗಳಲ್ಲಿ ಶೈವ ದೇವಾಲಯಗಳಲ್ಲಾದರೆ ನಂದಿ ಶಿಲ್ಪವನ್ನು, ವೈಷ್ಣವ ದೇವಾಲಯಗಳಲ್ಲಾದರೆ

ಗರುಡ ಶಿಲ್ಪವನ್ನು ಚಿತ್ರಿಸಿರುತ್ತಾರೆ. ಈ ರೀತಿಯ ಶಿಲ್ಪಗಳನ್ನು ಕೆಲವು ದೇವಾಲಯಗಳಲ್ಲಿ ಮಾತ್ರ ಕಾಣಬಹುದು.

ಶಿಖರದ ಮುಂಭಾಗದಲ್ಲಿ ಸುಖನಾಸಿಯಿರುತ್ತದೆ. ಇದೂ ಸಹ ಶಿಖರದ ಮುಂದುವರಿದ ಒಂದು ಭಾಗವಾಗಿದೆ. ಈ ಶುಕನಾಸಿಯ ಮೇಲ್ಭಾಗದಲ್ಲಿ ಸಳನು ಹುಲಿಯನ್ನು ಕೊಲ್ಲುತ್ತಿರುವ ದೃಶ್ಯವು ಶಿಲ್ಪಗಳ ರೂಪದಲ್ಲಿ ಕಂಡುಬರುತ್ತದೆ. ಇದು ಹೊಯ್ಸಳರ ಲಾಂಛನವಾಗಿಯು ಇದ್ಧಿತ್ತೆಂದು ಹೇಳಬಹುದು. ಮತ್ತೆ ಕೆಲವು ದೇವಾಲಯಗಳ ಸುಖನಾಸದಲ್ಲಿ ದೇವಾಲಯದ ಮುಖ್ಯದೇವರ ವಾಹನಗಳನ್ನು ಚಿತ್ರಿಸಿರುತ್ತಾರೆ. ಹಾಗಾಗಿ ನಂದಿ ಅಥವಾ ಗರುಡನನ್ನು ಚಿತ್ರಿಸಿರುವುದುಂಟು ಈ ಲಕ್ಷಣಗಳನ್ನು ಹೀರೆನಲ್ಲೂರಿನ ಮಲ್ಲಿಕಾರ್ಜುನ ದೇವಾಲಯದಲ್ಲಿ ಕಾಣಬಹುದು. ಈ ಸುಕನಾಸದ ಮುಂಭಾಗದಲ್ಲಿ ಕೆಲವೊಮ್ಮೆ ಶಿಲ್ಪಗಳು ಕಂಡುಬಂದರೆ ಇನ್ನೂ ಕೆಲವು ಕಡೆ ಅಲಂಕಾರಿಕ ಚಿತ್ರಗಳನ್ನು ಮಾಡಿರುತ್ತಾರೆ. ಹೊಯ್ಸಳರ ಬಹುಕೂಟಗಳುಳ್ಳ ದೇವಾಲಯಗಳಲ್ಲಿ ಆಯಾ ಗರ್ಭಗುಡಿಗಳಿಗೆ ಅನುಗುಣವಾಗಿ ಶಿಖರಗಳನ್ನು ನಿರ್ಮಿಸಿರುವುದುಂಟು ಸಾಮಾನ್ಯವಾಗಿ ಎಲ್ಲ ಶಿಖರಗಳು ಒಂದೇ ರೀತಿಯ ಲಕ್ಷಣಗಳನ್ನು ಹೊಂದಿರುತ್ತವೆ. ಒಟ್ಟಿನಲ್ಲಿ ಇವರ ಕಾಲದ ಶಿಖರಗಳು ದ್ರಾವಿಡ ರೀತಿಯಲ್ಲಿರುವಂತೆ ಮೇಲು ಮೆಲಕ್ಕೇರುತ್ತ ಅತಿ ಎತ್ತರವಾಗಿ ಬೆಳೆಯದೆ ಅಡ್ಡಡ್ಡಲಾದ ರಚನೆ ಮತ್ತು ಅಲಂಕಾರದ ಭಾಗಗಳಿಂದ ಸಮತೋಲನವನ್ನು ಕಾಪಾಡಿಕೊಂಡು ಬಂದಿವೆ.

**ಕಂಭಗಳು**

ದೇವಾಲಯಗಳಲ್ಲಿ ಕಾಣುವ ಬಹಳ ಮುಖ್ಯವಾದ ಮತ್ತು ಗಮನಾರ್ಹವಾದ ಅಂಶಗಳೆಂದರೆ ಕಂಬಗಳ ರಚನೆ. ಸಾಮಾನ್ಯವಾಗಿ ಹೊಯ್ಸಳರ ಕಾಲದ ದೇವಾಲಯಗಳ ಕಂಭಗಳು ದೇವಾಲಯದ ಅಂದವನ್ನು ಹಿಮ್ಮಡಿಗೊಳಸುತ್ತವೆ. ಇವರ ಕಾಲದ ಕಂಭಗಳ ರಚನಾಕ್ರಮವು ಎಂಥಹವರನ್ನು ಬೆರಗುಗೊಳಸುತ್ತದೆ. ಚೌಕಾಕಾರದ ಪೀಠ, ದುಂಡಾದ ಮೈಯುಳ್ಳ ಹಲವು ಬಳೆಗಳಿಂದ ರಚನೆಯಾದಂತೆ, ಕುಂಭ, ಗಂಟೆಗಳ ಆಕೃತಿಯಲ್ಲಿ ಅಲಂಕರಣಗೊಂಡು ಹಲವಾರು ಸೂಕ್ಷ್ಮಾತಿಸೂಕ್ಷ್ಮ ಉಂಗುರ ರೇಖೆಗಳಿಂದ, ನಕ್ಷತ್ರಾಕಾರದ ಬಳೆಗಳಿಂದ ಕೂಡಿರುತ್ತದೆ. ಕೆಲವು ಕಂಭಗಳಂತು ಕನ್ನಡಿಯಂತೆ ಹೊಳಪನ್ನು ಹೊಂದಿವೆ. ಈ ರೀತಿಯ ಕಂಭಗಳನ್ನು ತಿರುಗು ಯಂತ್ರದ ಮೇಲೆ ತಿರುಗಿಸಿ ದುಂಡಗೆ ಮಾಡಿ ಮೇಲೆ ವಿವರಿಸಿದ ಕಂಭಗಳನ್ನು ಮಾಡಿರುತ್ತಾರೆ. ಕಂಭಗಳ ಮೇಲಿನ ಬೋದಿಗೆಗಳು ಸಹ ಅಲಂಕಾರಿಕವಾಗಿರುತ್ತವೆ. ತರಂಗಪಟ್ಟಿಕೆಗಳಿಂದ ಬಾಳೆ ಹೂವಿನ ಮೊಗ್ಗಿನಂತೆ ಹೊರಚಾಚಿರುವ ಭಾಗದ ಅಲಂಕರಣದಿಂದ ಚೌಕಾಕಾರವಾಗಿ, ಆಯತಾಕಾರವಾಗಿ ಮತ್ತು ವೃತ್ತಾಕಾರವಾಗಿಯೂ ಬೋದಿಗೆಗಳು ಕಂಡು ಬರುತ್ತವೆ. ಕೆಲವು

ದೇವಾಲಯಗಳಲ್ಲಿ ಮದನಿಕೆಯರ ಶಿಲ್ಪಗಳನ್ನು ಹಾಕಲು ಕೂಡಾ ಬೋದಿಗೆಗಳನ್ನು ಬಳಸಿರುವುದು ಕಂಡುಬರುತ್ತದೆ. ಉದಾಹರಣೆಗೆ ಕಿಕ್ಕೇರಿಯ ಬ್ರಹ್ಮೇಶ್ವರ ದೇವಾಲಯ. ಸಾಮಾನ್ಯವಾಗಿ ಮದನಿಕೆಯರ ಶಿಲ್ಪಗಳು ಬೋದಿಗೆ ಮತ್ತು ಮೇಲ್ಛಾವಣಿಗೆ ಹೊಂದಿಕೊಂಡಂತೆ ಅಂದರೆ ಕೆಳಭಾಗವನ್ನು ನೋಡುತ್ತಿರುವ ಹಾಗೆ ಕೆಳಗೆ ಭಾಗಿಸಿ ಹಾಕಲಾಗಿರುತ್ತದೆ. ಭಿತ್ತಿಯಲ್ಲಿ ಅಲಂಕರಣೆಗೋಸ್ಕರ ಅಲ್ಲಲ್ಲಿ ಅರೆಕಂಭಗಳನ್ನು ಕೆತ್ತಿರುತ್ತಾರೆ. ಮತ್ತೆ ಕೆಲವು ಭಿತ್ತಿಕಂಭಗಳಿದ್ದು ಇವುಗಳು ಸ್ವತಂತ್ರವಾಗಿರದೆ ದೇವಾಲಯದ ಭಾರವನ್ನು ಹೊರುವುದರ ಜೊತೆಗೆ ಅಲಂಕಾರಿಕವಾಗಿಯೂ ಇರುತ್ತವೆ. ಇವುಗಳ ಅರ್ಧಭಾಗ ಭಿತ್ತಿಗೆ ಹೊಂದಿಕೊಂಡಿದ್ದು ಉಳಿದ ಭಾಗವು ದೇವಾಲಯದ ಒಳಭಾಗಕ್ಕೆ ಇರುತ್ತದೆ. ಈ ಭಾಗಗಳು ಮಾತ್ರ ಅಲಂಕಾರಿಕವಾಗಿರುತ್ತವೆ. ಇವು ಸಾಮಾನ್ಯವಾಗಿ 16, 32 ಅಂಚುಗಳಿಂದ ಚಿತ್ರಿತವಾಗಿರುತ್ತವೆ.

**ಭುವನೇಶ್ವರಿಗಳು**

ದೇವಾಲಯಗಳಲ್ಲಿ ಹೆಚ್ಚೆಚ್ಚು ಅಲಂಕಾರಿಕ ಭಾಗವೆಂದರೆ ಭುವನೇಶ್ವರಿಗಳು, ದೇವಾಲಯದ ಗರ್ಭಗೃಹ, ಶುಕನಾಸಿ ಮತ್ತು ನವರಂಗಗಳ ಪ್ರತಿ ಅಂಕಣಗಳಲ್ಲಿಯ ಒಳಛಾವಣಿಗಳು ಸಹ ಅಲಂಕೃತವಾಗಿರುತ್ತವೆ. ಸಾಮಾನ್ಯವಾಗಿ ಗರ್ಭಗೃಹ ಮತ್ತು ಶುಕನಾಸಿಯ ಭುವನೇಶ್ವರಿಗಳಲ್ಲಿ ಹೆಚ್ಚು ಅಲಂಕೃತವೇನು ಕಂಡುಬರುವುದಿಲ್ಲ. ಇಲ್ಲಿ ಭುವನೇಶ್ವರಿಗಳು ಇದ್ದರೂ ಅವುಗಳು ಸಾಮಾನ್ಯ ಲಕ್ಷಣವಾದ ಅರಳಿದ ಕಮಲದ ಕೆತ್ತನೆಯನ್ನು ಹೊಂದಿರುತ್ತವೆ. ಇಲ್ಲಿ ಶಿಲ್ಪಗಳನ್ನು ಕೆತ್ತಿರುವುದಿಲ್ಲ. ಇನ್ನೂ ಕೆಲವು ದೇವಾಲಯಗಳಲ್ಲಿ ಕೇವಲ ಪದ್ಮದ ಅಲಂಕರಣೆಯನ್ನು ಮಾತ್ರ ಕಾಣಬಹುದು. ತೊಲೆಯ ಮೇಲ್ಭಾಗದಲ್ಲಿ ಸಣ್ಣ ಸಣ್ಣ ಕಲ್ಲಿನ ತೊಲೆಗಳನ್ನು ಹಾಕುತ್ತಾ ಮೇಲಕ್ಕೆ ಹೋದಂತೆ ಕಿರಿದಾಗಿರುತ್ತಾ ಮೂಲೆಕಲ್ಲುಗಳಿಂದ ಅಲಂಕೃತವಾಗಿರುತ್ತವೆ. ಮಧ್ಯಭಾಗದಲ್ಲಿ ಇಳಿಬಿಟ್ಟ ಕಮಲದ ಮೊಗ್ಗಿನಾಕಾರದಲ್ಲಿ ಇರುತ್ತವೆ. ಇದು ಹೊಯ್ಸಳರ ಕಾಲದ ಎಲ್ಲಾ ದೇವಾಲಯಗಳಲ್ಲಿ ಕಂಡುಬರುವ ಭುವನೇಶ್ವರಿಗಳ ಸಾಮಾನ್ಯ ಲಕ್ಷಣವಾಗಿದೆ. ಕೆಲವು ದೇವಾಲಯಗಳಲ್ಲಿ ನವರಂಗದ ಮಧ್ಯದಂಕಣದ ಭುವನೇಶ್ವರಿಯು ಮಾತ್ರ ವಿಶಾಲತೆಯಿಂದ ಕೂಡಿದ್ದು ಹೆಚ್ಚಿನ ಅಲಂಕರಣೆಯನ್ನು ಹೊಂದಿರುತ್ತದೆ. ಇವುಗಳಲ್ಲಿ ಬಾಳೆ ಮೊಗ್ಗಿನ ಆಕಾರದ ಇಳಿ ಬಿಟ್ಟ ಹೂವು ಕೆಳಗೆ ನೇತಾಡುವಂತೆ ಇರುತ್ತದೆ. ಇದರ ಮಧ್ಯಭಾಗದಲ್ಲಿ ಸೂಕ್ಷ್ಮ ರೀತಿಯಿಂದ ಕೂಡಿರುವ ಶಿಲ್ಪಗಳನ್ನು ಚಿತ್ರಿಸಿರುತ್ತಾರೆ. ದಿಂಡು ಕಲ್ಲಿನಲ್ಲಿ ಆಯಾ ದಿಕ್ಕಿಗೆ ಅನುಗುಣವಾಗಿ ಅಷ್ಟದಿಕ್ಪಾಲಕರು ಪತ್ನಿಯರ ಸಮೇತವಾಗಿ ತಮ್ಮ ವಾಹನದ ಮೇಲೆ ಕುಳಿತಿರುವಂತೆಯು ಕೆತ್ತಲಾಗಿರುತ್ತದೆ. ಭುವನೇಶ್ವರಿಯ ಪಟ್ಟಿಕೆಗಳಲ್ಲಿ ದೇವತೆಗಳ ವಿವಿಧ ಅವತಾರಗಳ ಶಿಲ್ಪಗಳು, ಉಪದೇವತೆಗಳ ಶಿಲ್ಪಗಳು, ಪರಿವಾರ ದೇವತೆಗಳು,

ನೃತ್ಯಗಾರ್ತಿಯರು, ವಾದ್ಯವಾದಕರು ಈಗೆ ಹತ್ತು ಹಲವಾರು ಶಿಲ್ಪಗಳನ್ನು ಭುವನೇಶ್ವರಿಯ ಅಳತೆಗನುಗುಣವಾಗಿ ಚಿತ್ರಿಸಲಾಗಿರುತ್ತದೆ. ಕೆಲವು ಭುವನೇಶ್ವರಿಗಳನ್ನು ಕೇವಲ ಅಷ್ಟದಿಕ್ಪಾಲಕರಿಗಾಗಿಯೇ ಮೀಸಲಿಡಲಾಗಿದೆ. ಮಧ್ಯಭಾಗದಲ್ಲಿ ಶಿವನ ಅಥವಾ ವಿಷ್ಣುವಿನ ಅವತಾರ ಶಿಲ್ಪಗಳನ್ನು ಚಿತ್ರಿಸಿದ್ದು ಸುತ್ತಲೂ ಆಯಾ ದಿಕ್ಕಿಗೆ ಅನುಗುಣವಾಗಿರುವಂತೆ ಅಷ್ಟದಿಕ್ಪಾಲಕರನ್ನು ಚಿತ್ರಿಸಲಾಗಿರುತ್ತದೆ. ಮತ್ತೆ ಕೆಲವು ಭುವನೇಶ್ವರಿಗಳಲ್ಲಿ ನಾಗಮಂಡಲ ಅಥವಾ ನಾಗಬಂಧ, ವೇಣುಗೋಪಾಲ ಹೀಗೆ ಹಲವಾರು ಅಂಶಗಳನ್ನು ಒಳಗೊಂಡಂತಹ ಭುವನೇಶ್ವರಿಗಳನ್ನು ನವರಂಗ ಹಾಗೂ ಮುಖಮಂಟಪದಲ್ಲಿ ಕಾಣಬಹುದು.

**ದ್ವಾರಗಳು**

ದೇವಾಲಯದ ಒಳಗೆ ಪ್ರವೇಶಿಸಲು ಇರುವ ಜಾಗವೆ ದ್ವಾರಗಳು. ಇವುಗಳು ದೇವಾಲಯದ ಒಳಗೆ ಹೋಗುವ ಮುಂಚಿತವಾಗಿ ಮೊದಲು ಕಾಣುವುದರಿಂದ ಇವುಗಳನ್ನು ಸಹ ಅಲಂಕೃತಗೊಳಿಸಿರುತ್ತಾರೆ. ಗರ್ಭಗೃಹಕ್ಕೆ ಶುಕನಾಸಿಯಿಂದ ಪ್ರವೇಶಿಸಲು, ನವರಂಗದಿಂದ ಶುಕನಾಸಿಗೆ ಪ್ರವೇಶಿಸಲು ದ್ವಾರಗಳು ಇರುತ್ತವೆ. ಕೆಲವೊಮ್ಮೆ ನವರಂಗದಿಂದ ಶುಕನಾಸಿಗೆ ಹೋಗಲು ದ್ವಾರವಿಲ್ಲದೆ ನವರಂಗಕ್ಕೆ ಹೊಂದಿಕೊಂಡಂತೆ ತೆರೆದ ಸುಕನಾಸಿಗಳಿರುತ್ತವೆ ಇಲ್ಲಿ ದ್ವಾರಗಳು ಕಂಡುಬರುವುದಿಲ್ಲ. ಇನ್ನೂ ಮುಖ್ಯ ದ್ವಾರಗಳು ನವರಂಗಕ್ಕೆ ಪ್ರವೇಶವನ್ನು ಒದಗಿಸುತ್ತವೆ. ಇವುಗಳು ಒಂದು, ಎರಡು ಮತ್ತು ಮೂರು ಸಂಖ್ಯೆಯಲ್ಲಿ ಇದ್ದು ಇವು ನೇರವಾಗಿ ನವರಂಗಕ್ಕೆ ಪ್ರವೇಶವನ್ನು ಕಲ್ಪಿಸುತ್ತವೆ. ಹೆಚ್ಚಿನ ಸಂಖ್ಯೆಯ ದೇವಾಲಯಗಳಲ್ಲಿ ಒಂದೆ ದ್ವಾರವು ಇರುವುದನ್ನು ಕಾಣಬಹುದು. ಕೆಲವು ಸಮಯದಲ್ಲಿ ನವರಂಗಕ್ಕೆ ಪ್ರವೇಶವನ್ನು ಕಲ್ಪಿಸುವ ದ್ವಾರಗಳು ಮಂಟಪದ ರಚನೆಗಳನ್ನು ಹೊಂದಿರುತ್ತವೆ. ದ್ವಾರದ ಎರಡು ಬದಿಯಲ್ಲು ಸಣ್ಣದಾದ ಅಲಂಕಾರಿಕ ಶಾಖೆಗಳನ್ನು ಮಾಡಿರುತ್ತಾರೆ ಇವುಗಳು ನಾಲ್ಕು, ಐದು, ಆರು, ಏಳು ಹೀಗೆ ಅಲ್ಲಿನ ಅನುಕೂಲಕ್ಕಾಗಿ ಮಾಡಿರುತ್ತಾರೆ. ಈ ಶಾಖೆಗಳನ್ನು ಲತಾಸುರುಳಿಗಳು, ಹೂಗಳು, ಅರೆಕಂಬಗಳು ಹಾಗೂ ಇನ್ನಿತರ ಅಲಂಕರಣವಾದ ಚಿತ್ರಗಳಿಂದ ಚಿತ್ರಿಸಿರುತ್ತಾರೆ. ಕೆಲವು ಕಡೆಯಲ್ಲಿ ತೆಳುವಾದ ಅಲಂಕಾರಿಕ ಕಂಬಗಳು ಪೂರ್ಣಕಂಬಗಳು ಸಹ ಇರುತ್ತವೆ. ಮತ್ತೆ ಕೆಲವು ದೇವಾಲಯದ ದ್ವಾರದ ಬದಿಯಲ್ಲಿ ಜಾಲಂಧ್ರವನ್ನು ಚಿತ್ರಿಸಿರುತ್ತಾರೆ ಈ ರೀತಿಯ ಲಕ್ಷಣಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಶುಕನಾಸಿಯ ದ್ವಾರಗಳಲ್ಲಿ ಕಾಣಬಹುದು. ದ್ವಾರದ ಇಕ್ಕೆಲದ ಕೆಳಭಾಗದಲ್ಲಿ ದ್ವಾರಪಾಲಕರ ಚಿತ್ರಗಳನ್ನು ರಚಿಸಿರುತ್ತಾರೆ ಕೆಲವು ಸಮಯದಲ್ಲಿ ಕಾಮ-ರತಿಯರನ್ನು ಚಿತ್ರಿಸಿರುವುದುಂಟು. ಮೇಲ್ಭಾಗದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವು ಸಾಮಾನ್ಯವಾಗಿರುತ್ತದೆ. ಇಲ್ಲಿನ ಶಿಲ್ಪವು ದೇವಾಲಯದ

ಮುಖ್ಯ ದೇವತೆ ಅಥವಾ ಆ ದೇವತೆಗೆ ಸಂಬಂಧಿಸಿದ ಶಿಲ್ಪದ ಕೆತ್ತನೆಗಳು ಕಂಡುಬರುತ್ತದೆ. ಲಲಾಟ ಬಿಂಬದ ಎರಡು ಬದಿಯಲ್ಲಿ ಇತರ ಪರಿವಾರ ದೇವತೆಗಳು ವ್ಯಾಳ ಅಥವಾ ಅಲಂಕಾರಿಕ ಶಿಲ್ಪಗಳನ್ನು ಕೆತ್ತಲಾಗಿರುತ್ತದೆ. ದ್ವಾರದ ಮೇಲ್ಪಟ್ಟಿಕೆಯಲ್ಲಿ ಇಳಬಿಟ್ಟ ಗುಬುಟುಗಳನ್ನು ಕೆತ್ತಲಾಗಿರುತ್ತದೆ. ಕೆಲವು ದೇವಾಲಯಗಳಲ್ಲಿ ಲಲಾಟ ಬಿಂಬದ ಮೇಲ್ಭಾಗದಲ್ಲಿಯೂ ಸಹ ಶಿಲ್ಪಗಳನ್ನು ಕೆತ್ತಿರುತ್ತಾರೆ ಇವುಗಳ ಜೊತೆಗೆ ಅಲಂಕಾರಿಕ ಚಿತ್ರಗಳು ಹಾಗು ಸಣ್ಣ ಸಣ್ಣ ಮಂಟಪ (ವಿಮಾನ) ಗಳನ್ನು ಕೆತ್ತಲಾಗಿರುತ್ತದೆ.

**ದ್ವಾರಪಾಲಕರು**

ದೇವಾಲಯದ ಗರ್ಭಗೃಹ, ಶುಕನಾಸಿ, ನವರಂಗ ಮತ್ತು ಮುಖಮಂಟಪಗಳ ದ್ವಾರಬಂಧದ ಕೆಳಭಾಗದಲ್ಲಿ ದ್ವಾರಪಾಲಕರನ್ನು ಚಿತ್ರಿಸಿರುತ್ತಾರೆ. ಇವುಗಳು ಆಯಾ ದೇವಾಲಯದ ಮುಖ್ಯ ದೇವಾಲಯದ ದೇವತೆಗಳಿಗೆ ಅನುಗುಣವಾಗಿರುತ್ತವೆ. ಶೈವ ದೇವಾಲಯಗಳಲ್ಲಾದರೆ ಶೈವದ್ವಾರಪಾಲಕರನ್ನು, ವೈಷ್ಣವ ದೇವಾಲಯಗಳಲ್ಲಾದರೆ ವೈಷ್ಣವ ದ್ವಾರಪಾಲಕರನ್ನು ಚಿತ್ರಿಸಲಾಗುತ್ತದೆ. ಶಿಲ್ಪಿಗಳು ಕೆಲವು ದೇವಾಲಯಗಳಲ್ಲಿ ದ್ವಾರಪಾಲಕರನ್ನು ಆಳೆತ್ತರದಷ್ಟು ಎತ್ತರದ ಬಿಡಿಶಿಲ್ಪಗಳಾಗಿ ನಿರ್ಮಿಸಿದ್ದಾರೆ. ಇವರಿಗೂ ಸಹ ದೇವತೆಗಳಿಗೆ ಇರುವಂತೆ ಆಯುಧಗಳು, ಹಾಗೂ ಅಲಂಕರಣವನ್ನು ಮಾಡಲಾಗುತ್ತದೆ.

ಸ್ತ್ರೀ ದೇವತೆಗಳಿರುವ ಗುಡಿಗಳಿರುವ ದ್ವಾರಬಂಧದ ಕೆಳಭಾಗದಲ್ಲಿ ಆಯಾ ಪಂಥಕ್ಕೆ ಅನುಗುಣವಾಗಿ ದ್ವಾರಪಾಲಕಿಯರನ್ನು ಚಿತ್ರಿಸಲಾಗಿದೆ. ಇವರು ಸಹ ಆಯಾ ಧರ್ಮಕ್ಕೆ ಅನುಗುಣವಾಗಿ ಆಯುಧವನ್ನು ಹೊಂದಿರುತ್ತಾರೆ. ಕೆಲವು ದ್ವಾರಗಳಲ್ಲಿ ದ್ವಾರಪಾಲಕರ ಬದಲು ರತಿ ಮನ್ಮಥರನ್ನು ಚಿತ್ರಿಸಿರುವುದುಂಟು.

ದೇವಾಲಯದ ಕಟ್ಟಡದ ಒಳ ಉಪಯೋಗಗಳು ಸಹ ಬಹು ಮುಖ್ಯವಾಗಿದೆ. ಗರ್ಭಗೃಹವು ನವರಂಗಕ್ಕಿಂತ ಚಿಕ್ಕದಾಗಿದ್ದು ಇಲ್ಲಿ ಪೀಠದ ಮೇಲೆ ಮೂಲ ವಿಗ್ರಹವನ್ನು ಪ್ರತಿಷ್ಠಾಪಿಸಿರುತ್ತಾರೆ. ಇದು ದೇವರ ಮೂಲಸ್ಥಾನವು ಆಗಿದೆ.[10] ಇಲ್ಲಿ ಹೆಚ್ಚಿನ ಜಾಗವನ್ನು ಕಲ್ಪಿಸಲಾಗಿರುವುದಿಲ್ಲ. ದೇವರ ಪೂಜೆಗೆ, ನೈವೇದ್ಯಕ್ಕೆ ಎಷ್ಟು ಅವಶ್ಯಕವೋ ಅಷ್ಟನ್ನು ಮಾತ್ರ ಬಿಟ್ಟಿರುತ್ತಾರೆ. ಶುಕನಾಸಿಯು ಸಾಮಾನ್ಯವಾಗಿ ಗರ್ಭಗೃಹದಷ್ಟೇ ವಿಸ್ತೀರ್ಣವನ್ನು ಹೊಂದಿರುತ್ತದೆ. ಶುಕನಾಸಿಯಲ್ಲಿ ಪ್ರಾರಂಭದಲ್ಲಿ ಪರಿವಾರ ದೇವತೆಗಳಿಗಾಗಿ ಮೀಸಲಾಗಿತ್ತು ಎಂದು ಹೇಳಬಹುದು. ಮೊದಲಿಗೆ ಪರಿವಾರ ದೇವತೆಗಳಿಗೆ ಪ್ರತ್ಯೇಕವಾದ ದೇವಾಲಯಗಳಿರಲಿಲ್ಲ. ಹೀಗಾಗಿ ಇವರಿಗಾಗಿ ಈ ಜಾಗವನ್ನು ಮೀಸಲಿಟ್ಟಿರಬಹುದು. ಆದರೆ ಪ್ರಸ್ತುತ ಎಲ್ಲಾ ದೇವಾಲಯಗಳಲ್ಲೂ ಸಹ ಪರಿವಾರ ದೇವತೆಗಳ ಶಿಲ್ಪಗಳನ್ನು ನವರಂಗ

ಅಥವಾ ರಂಗಮಂಟಪದಲ್ಲಿ ಇಡಲಾಗಿದೆ. ಶುಕನಾಸಿಯಲ್ಲಿ ಮೂಲವಿಗ್ರದ ಪ್ರತಿರೂಪದಂತೆ ಇರುವ ಉತ್ಸವಮೂರ್ತಿ ಅಥವಾ ಚಲುವಮೂರ್ತಿಗಳನ್ನು ಇಟ್ಟಿರುತ್ತಾರೆ. ಇತ್ತೀಚೆಗೆ ಅವುಗಳನ್ನು ಇಡಲು ಎಲ್ಲಿ ಸುರಕ್ಷಿತವೋ ಅಲ್ಲಿ ಇಡಲಾಗುತ್ತಿದೆ. ನವರಂಗವು ದೇವಾಲಯದ ಉಳಿದ ಭಾಗಕ್ಕಿಂತ ಹೆಚ್ಚು ವಿಶಾಲವಾಗಿದ್ದು ಇದು ದೇವಾಲಯದ ವಿಭಿನ್ನ ಕಾರ್ಯ ಚಟುವಟಿಕೆಗಳನ್ನು ನಡೆಸುವ ಮುಖ್ಯ ಕೇಂದ್ರವಾಗಿತ್ತು. ಇಲ್ಲಿ ಸಂಗೀತ, ನೃತ್ಯಗಳನ್ನು ನಡೆಸಲು ಬಳಸಲಾಗುತಿತ್ತು. ಕಾಲನಂತರದಲ್ಲಿ ಇವುಗಳ ಜಾಗವು ಸಹ ಇಕ್ಕಟ್ಟಾದಾಗ ತೆರೆದ ವಿಶಾಲವಾದ ಮುಖಮಂಟಪವನ್ನು ರಚಿಸಿದರು. ಇಲ್ಲಿ ದೇವಾಲಯದ ಇನ್ನಿತರ ಕಾರ್ಯಗಳನ್ನು ಮಾಡುತ್ತಿದ್ದರು. ನೃತ್ಯ ಮತ್ತು ಸಂಗೀತ ಹಾಗೂ ಇನ್ನಿತರ ಕಾರ್ಯಕ್ರಮಗಳನ್ನು ನೋಡಲು, ಜನರಿಗೆ ಕುಳಿತುಕೊಳ್ಳಲು ಅನುಕೂಲವಾಗುವಂತೆ ಕಕ್ಷಾಸನವನ್ನು ನಿರ್ಮಿಸುವ ಪದ್ಧತಿಯನ್ನು ರೂಢಿಯಲ್ಲಿಟ್ಟರು.

ಪ್ರಾರಂಭದಲ್ಲಿ ಹೊಯ್ಸಳರು ಸರಳವಾದ ಅಲಂಕರಣೆಯಿರುವ ದೇವಾಲಯಗಳನ್ನು ನಿರ್ಮಾಣ ಮಾಡಿದರು. ಅವುಗಳ ವಿಸ್ತಾರಕ್ಕೆ ತಕ್ಕಂತೆ ಹೊರ ಭಾಗ ಮತ್ತು ಒಳಭಾಗಗಳಲ್ಲಾದ ಮಾರ್ಪಾಡುಗಳು ಎತ್ತರ ಮತ್ತು ವಿಸ್ತಾರಕ್ಕೆ ತಕ್ಕಂತೆ ಕಂಭಗಳು, ಭಿತ್ತಿಗಳ ನಿರ್ಮಾಣ, ಗಾಳಿ ಬೆಳಕಿನ ವ್ಯವಸ್ಥೆಗೆ ಮಾಡಿಕೊಂಡಂತಹ ಸೂಕ್ತ ವಿನ್ಯಾಸಗಳು ದೇವಾಲಯದ ಒಳಗಿನ ಗರ್ಭಗೃಹದ ಸರಳ ಗಾಂಭಿರ್ಯ ರಚನೆ ಮುಂದಿನ ಶುಕನಾಸಿಯ ಉಪಯುಕ್ತತೆ ಅದಕ್ಕೆ ತಕ್ಕಂತೆ ವಿನ್ಯಾಸ ಮುಖಮಂಟಪದ ವಿನ್ಯಾಸ ಹೀಗೆ ದೇವಾಲಯದ ಒಳಗಿನ ಯಾವ ಭಾಗದ ರಚನೆಯೂ ಅನವಶ್ಯಕ ಹಾಗೂ ಅನುಪಯುಕ್ತ ಎನ್ನುವ ಭಾವನೆಯು ಬರದಂತೆ ಬೆಳೆದಿತ್ತು. ಗರ್ಭಗೃಹದಲ್ಲಿ ಮತ್ತು ಶುಕನಾಸಿಯಲ್ಲಿ ಹೆಚ್ಚು ಜನರಿಗೆ ಸ್ಥಳಾವಕಾಶವಿರಲಿಲ್ಲ, ಹೆಚ್ಚು ಜನರಿಗೆ ಸ್ಥಳಾವಕಾಶವಿದ್ದ ನವರಂಗ ಮತ್ತು ಮುಖಮಂಟಪಗಳು ಹೆಚ್ಚು ಆಕರ್ಷಕ ಭಾಗಗಳಾಗಿ ಬೆಳೆದವು ವಿಸ್ತಾರವಾಗಿ ಶಿಲ್ಪಕಲೆಯ ತಾಂತ್ರಿಕ ಕುಶಲತೆ ಮತ್ತು ಪ್ರದರ್ಶನಾತ್ಮಕ ಅಂಶಗಳಿಗೆ ಎಡೆಮಾಡಿಕೊಟ್ಟವು. ಕಕ್ಷಾಸನ, ಕಂಭಗಳ ರಚನೆ, ಬಿಡಿ ಶಿಲ್ಪಗಳು, ಮದನಿಕೆಯರು, ಭಿತ್ತಿ ಶಿಲ್ಪಗಳು, ಭುವನೇಶ್ವರಿಗಳು ಮತ್ತಿತರ ವಾಸ್ತು ಕೃತಿಗಳು ದೇವಾಲಯದ ವಿನ್ಯಾಸಕ್ಕನುಗುಣವಾಗಿ ಬೆಳೆದವು. ದೇವಾಲಯದ ಹೊರ ಭಾಗದಲ್ಲಿ ಮಾತ್ರ ಯಾವೊಂದು ಜಾಗವು ಖಾಲಿಯಾಗಿರದೆ ಎಲ್ಲ ಭಾಗಗಳನ್ನು ಅಲಂಕರಿಸುತ್ತಾ ಹೋದಂತ್ತೆಲ್ಲಾ ಕೆಲವು ವಿಶೇಷ ಶಿಲ್ಪಗಳು ಬೆಳೆದವು.

**ಆಕರ ಗ್ರಂಥಗಳು**


1. ದಕ್ಷಿಣ ಭಾರತದ ವಾಸ್ತುಶಿಲ್ಪಕ್ಕೆ ಬಾದಾಮಿ ಚಾಲುಕ್ಯರ ಕೊಡುಗೆ – ಡಾ. ಎಸ್. ರಾಜಶೇಖರ, ಪು.4–5
2. ಕರ್ನಾಟಕ ಸಂಸ್ಕೃತಿ ಸಮೀಕ್ಷೆ – ಡಾ. ಎಚ್. ತಿಪ್ಪೇರುದ್ರಸ್ವಾಮಿ, ಪು.578
3. ಇಂಡಿಯನ್ ಆರ್ಕಿಟೆಕ್ಚರ್ - ಪರ್ಸಿ ಬ್ರೌನ್, ಪು.138
4. ಮಂಡ್ಯ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ – ತೈಲೂರು ವೆಂಕಟಕೃಷ್ಣ, ಪು.30
5. ಇಂಡಿಯನ್ ಆರ್ಕಿಟೆಕ್ಚರ್ - ಪರ್ಸಿ ಬ್ರೌನ್, ಪು.139
6. ಎ ಡಿಕ್ಷನರಿ ಆಫ್ ಹಿಂದು ಆರ್ಕಿಟೆಕ್ಚರ್ - ಪಿ.ಕೆ.ಆಚಾರ್ಯ, ಪು.17
7. ಹೊಯ್ಸಳ ಟೆಂಪಲ್ಸ್ ಇನ್ ಮಂಡ್ಯ ಅಂಡ್ ತುಮಕೂರು ಡಿಸ್ಟ್ರಿಕ್ಟ್ – ಡಾ. ಎನ್.ಎಸ್.ರಂಗರಾಜು - ಪು. 70
8. ಎ ಡಿಕ್ಷನರಿ ಆಫ್ ಹಿಂದು ಆರ್ಕಿಟೆಕ್ಚರ್ - ಪಿ.ಕೆ.ಆಚಾರ್ಯ, ಪು.450–51
9. ಅದೇ, ಪು.588
10. ಅದೇ, ಪು.164

# ಅಧ್ಯಾಯ – 4

# ಕಿಕ್ಕೇರಿಯ ದೇವಾಲಯಗಳು

ಕಿಕ್ಕೇರಿಯು ಮಂಡ್ಯ ಜಿಲ್ಲೆ ಕೃಷ್ಣರಾಜಪೇಟೆ ತಾಲ್ಲೂಕಿನ ಹೋಬಳಿ ಕೇಂದ್ರವಾಗಿದೆ. ಈ ಗ್ರಾಮವು ಕೃಷ್ಣರಾಜಪೇಟೆಯಿಂದ ಸುಮಾರು ಎಂಟು ಕಿ.ಮೀ. ದೂರದಲ್ಲಿದೆ. ಇಲ್ಲಿ ಕೀಕ ಎಂಬುವವನು ಆಡಳಿತ ನಡೆಸುತ್ತಿದ್ದುದರಿಂದ ಈ ಗ್ರಾಮಕ್ಕೆ ಕಿಕ್ಕೇರಿ ಎಂದು ಹೆಸರು ಬಂದುದಾಗಿ ಐತಿಹ್ಯವಿದೆ. ಗ್ರಾಮದಲ್ಲಿ ಬಹಳ ವಿಸ್ತಾರವಾದ ಕೆರೆಯಿದ್ದುದರಿಂದ ಬಹುಶಃ ಶಬ್ದಾರ್ಥದ ಭಾವದಿಂದ ಕಿಕ್ಕೇರಿ ಎಂದು ಬಂದಿರಬಹುದು. ಇಲ್ಲಿ ಹೊಯ್ಸಳರ ಕಾಲದ ಬ್ರಹ್ಮೇಶ್ವರ, ಲಕ್ಷ್ಮೀನರಸಿಂಹ ಮತ್ತು ಜನಾರ್ಧನ ದೇವಾಲಯಗಳಿವೆ. ಹಾಗೂ ವಿಜಯನಗರ ಕಾಲದಲ್ಲಿ ನಿರ್ಮಾಣವಾದ ಯೋಗನರಸಿಂಹ ದೇವಾಲಯವಿದೆ. ಕ್ರಿ.ಶ.18–19ನೆಯ ಶತಮಾನದಲ್ಲಿ ನಿರ್ಮಾಣವಾಗಿರುವ ಗ್ರಾಮ ದೇವತೆಯಾದ ಕಿಕ್ಕೇರಮ್ಮ ದೇವಾಲಯವಿದೆ. ಇದು ಹೊಯ್ಸಳರ ಕಾಲದಲ್ಲಿ ಅಗ್ರಹಾರವಾಗಿತ್ತು ಶಾಸನಗಳಲ್ಲಿ ಇದನ್ನು ಕಿಕ್ಕೇರಿ ಸ್ಥಳ, ಕಿಕ್ಕೇರಿಪುರ ಎಂದು ಸಹ ಉಲ್ಲೇಖಿಸಲಾಗಿದೆ.[1]

## ಬ್ರಹ್ಮೇಶ್ವರ ದೇವಾಲಯ

ದೇವಾಲಯವು ಪೂರ್ವಾಭಿಮುಖವಾಗಿದ್ದು ಇದು ಏಕಕೂಟ ದೇವಾಲಯವಾಗಿದೆ. ಇದು ಗರ್ಭಗೃಹ, ಸುಕನಾಸಿ, ನವರಂಗ ಹಾಗು ನಂದಿಮಂಟಪವನ್ನು ಹೊಂದಿದೆ. ನಂದಿ ಮಂಟಪದ ಕೆಲವು ಕಂಭಗಳನ್ನು ಮಾತ್ರ ಗ್ರಾನೈಟ್ ಶಿಲೆಯಿಂದ ನಿರ್ಮಿಸಿದ್ದಾರೆ. ಉಳಿದಂತೆಲ್ಲವು ಸೋಪುಗಲ್ಲಿನಿಂದ ಕಟ್ಟಲಾಗಿದೆ. ಇದು ಏಕಕೂಟ ದೇವಾಲಯವಾಗಿದ್ದು ಜಗತಿಯಿಲ್ಲದೆ ಅಲಂಕೃತ ಅದಿಷ್ಠಾನವನ್ನು ಹೊಂದಿದೆ. (ಚಿತ್ರ – 1,2,3,4) ಹಾಗೂ ಭಿತ್ತಿಶಿಲ್ಪಗಳನ್ನು ಹೊಂದಿದ್ದು ಇದು ದೇವಾಲಯದ ಸೌಂದರ್ಯಕ್ಕೆ ಹೆಚ್ಚು ಒತ್ತು ನೀಡಿದೆ.[2] ದೇವಾಲಯವು ಸಂಪೂರ್ಣವಾಗಿ ದ್ರಾವಿಡ ವಾಸ್ತು ಶೈಲಿಯನ್ನು ಹೊಂದಿದೆ. ದೇವಾಲಯವನ್ನು ಕ್ರಿ.ಶ.1095–96ರಲ್ಲಿ ಗಂಗ ಮಂಡಲವನ್ನು ಆಳುತ್ತಿದ್ದಂತಹ ಹೊಯ್ಸಳದೇವನು ಗಂಗ ಮಂಡಲವನ್ನು ಆಳುತ್ತಿದ್ದಾಗ ಇಲ್ಲಿಯ ಬ್ರಹ್ಮರಾಶಿ ಪಂಡಿತನ ಮಗ ಪೆರ್ಗಡೆ ಮಲ್ಲಿಯಣ್ಣನು ಬ್ರಹ್ಮೇಶ್ವರ ದೇವಾಲಯವನ್ನು ನಿರ್ಮಾಣ ಮಾಡಿದನು. ಇದರ ಪಕ್ಕದಲ್ಲಿ ಕೆರೆಯೊಂದನ್ನು ನಿರ್ಮಿಸಿ ದೇವಾಲಯಕ್ಕೆ ದಾನ ನೀಡಿದನು.[3] ಕ್ರಿ.ಶ.12ನೆಯ ಶತಮಾನದಲ್ಲಿ ಹೊಯ್ಸಳ ನರಸಿಂಹನ ಕಾಲದಲ್ಲಿ ದೇವಾಲಯಕ್ಕೆ ಸುಂಕದ ಧರಣಿದೇವ ಚೌಡಯ್ಯ ಮತ್ತು ಕಾಮತಮ್ಮನವರುಗಳು ಬ್ರಹ್ಮೇಶ್ವರನಿಗೆ ದಾನ ನಿಡಿದ್ದಾರೆ.[4] ಈ ದೇವಾಲಯವು ಹೊಯ್ಸಳರ

ಕಾಲದಲ್ಲಿ ನಿರ್ಮಾಣವಾಗಿದ್ದರೂ ಸಹ ಮುಖಮಂಟಪ, ಶುಕನಾಸಿಯ ದ್ವಾರ, ಮುಖಮಂಟಪದ ಕೆಲವು ಭಾಗ ಹಾಗು ನಂದಿಮಂಟಪಗಳನ್ನು ಕ್ರಿ.ಶ.16-17ನೆಯ ಶತಮಾನದಲ್ಲಿಯೂ ಸಹ ಜೀರ್ಣೋದ್ಧಾರ ಕೆಲಸಗಳನ್ನು ಮಾಡಿದ್ದಾರೆ.[5] ಈ ದೇವಾಲಯವನ್ನು ಮಾಡಿದ ರೂವಾರಿಗಳಾದ ನಕರಾಚಾರಿ,[6] ಮಸಣ,[7] ಹರಿಮಲ್ಲವರಿ ವಜ್ರದಣ್ಣ[8] ಎಂಬ ಶಿಲ್ಪಿಗಳ ಹೆಸರುಗಳನ್ನು ದೇವಾಲಯದ ಕೆಲವು ಭಾಗಗಳಲ್ಲಿ ಕಂಡರಿಸಿದ್ದಾರೆ.

**ಅಧಿಷ್ಠಾನ**

ದೇವಾಲಯವು ಜಗತಿಯಿಲ್ಲದೆ ಅದಿಷ್ಠಾನದ ಮೇಲಿದೆ. ಇದರ ತಳವಿನ್ಯಾಸವು 'ಆಮೆ' ದೇಹದ ರಚನೆಯನ್ನು ಹೋಲುತ್ತದೆ.[9] ಅದಿಷ್ಠಾನವು ಸುಮಾರು ನಾಲ್ಕು ಅಡಿ ಎತ್ತರವಿದ್ದು ಇಲ್ಲಿ ಉಪಾನ, ಕಂಪ, ಚೂಪಾದ ತ್ರಿಪಟ್ಟ ಕುಮುದ, ಕೆಳಮುಖ ಪದ್ಮ, ದಂತಪಕ್ತಿ ಹಾಗೂ ಪದ್ಮ ಪಟ್ಟಿಕೆಯನ್ನು ಹೊಂದಿದೆ. ದಂತ ಪಂಕ್ತಿಯ ಪಟ್ಟಿಕೆಯನ್ನು ಮುಂದಕ್ಕೆ ಚಾಚಿರುವಂತೆ ಕೆತ್ತಲಾಗಿದೆ. ಪ್ರತಿಯೊಂದು ದಿಂಡಿನ ಮೇಲೂ ಸಹ ವ್ಯಾಘ್ರದ ಚಿತ್ರವನ್ನು ಕೆತ್ತಲಾಗಿದೆ. (ಚಿತ್ರ - 1,2,3,4) ಇವುಗಳು ದಿಂಡಿನಿಂದ ಮುಂಚಲನಾಕ್ರಮದ ರೀತಿಯಲ್ಲಿ ಚಿತ್ರಿಸಿದ್ದು ನೋಡುಗರಿಗೆ ಎದುರಿಗೆ ಕಾಣುವಂತೆ ಚಿತ್ರಿಸಲಾಗಿದೆ. ಶಿಲ್ಪಿಯು ಈ ಒಂದು ಸಣ್ಣ ದಿಂಡುಗಳಲ್ಲಿ ಅಳತೆಗೆ ಅನುಗುಣವಾಗಿ ಕೆತ್ತಿರುವುದು ಒಂದು ವಿಶೇಷ ಎನ್ನಬಹುದು. ಅಲ್ಲಲ್ಲಿ ಮಧ್ಯಭಾಗದ ಒಂದೊಂದು ತುಸು ದಪ್ಪನಾಗಿರುವ ದಿಂಡಿನಲ್ಲಿ ದೇವತೆಗಳ ಶಿಲ್ಪಗಳು ಹಾಗೂ ಕೆಲವು ದಿಂಡುಗಳಲ್ಲಿ ಮಿಥುನ ಶಿಲ್ಪವನ್ನು ಸಹ ಕೆತ್ತಿದ್ದಾನೆ. ಮಿಥುನ ಶಿಲ್ಪಗಳು ದೇವಾಲಯಕ್ಕೆ ಬಿಡಿಸಿದ ಅಲಂಕಾರದ ಒಂದು ಭಾಗವಾಗಿರುತ್ತವೆ. ಜನತೆಗೆ ಲೈಂಗಿಕ ಶಿಕ್ಷಣ ದೊರಕಲೆಂದೆ ಇಲ್ಲವೆ ದೇವಾಲಯದ ಸೌಂದರ್ಯಕ್ಕೆ ದೃಷ್ಠಿ ತಾಗದಿರಲೆಂಬ ಉದ್ದೇಶದಿಂದ ಇವುಗಳನ್ನು ಬಿಡಿಸಿರಬಹುದು.[10] ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದ ಕೆಲವು ದೇವಾಲಯಗಳ ಅಧಿಷ್ಠಾನಗಳು ಸಾಮಾನ್ಯ ಅಲಂಕರಣವಾಗಿರುತ್ತವೆ. ಅಥವಾ ಶಿಲ್ಪಗಳ ಪಟ್ಟಿಕೆಯನ್ನು ಹೊಂದಿರುತ್ತವೆ. ಆದರೆ ಈ ದೇವಾಲಯದ ಅದಿಷ್ಠಾನದ ದಂತಪಂಕ್ತಿಯ ದಿಂಡುಗಳಲ್ಲಿ ಶಿಲ್ಪಗಳನ್ನು ಚಿತ್ರಿಸಿರುವುದು ವಿಶೇಷತೆಯಾಗಿದೆ. ಈ ಸಿಂಹ ಪಟ್ಟಿಕೆಯ ದಕ್ಷಿಣ ಭಾಗದ ಪಟ್ಟಿಕೆಯಲ್ಲಿ ನೃತ್ಯತಾಂಡವ ಶಿವ, ನಾಟ್ಯ ಸರಸ್ವತಿ, ನೃತ್ಯ ಭೇತಾಳ, ಮಿಥುನಶಿಲ್ಪ, ನೃತ್ಯಗಾರ್ತಿಯರು, ಕಾಳಭೈರವ, ಅನಂತಶಾಯಿ ವಿಷ್ಣು, ಡಮರುಗವನ್ನು ಭಾರಿಸುತ್ತಿರುವವರು, ವಾದ್ಯವಾದಕರು, ನಾಟ್ಯಗಣಪತಿ, ಹೀಗೆ ಹಲವಾರು ಶಿಲ್ಪಗಳನ್ನು ಬಹಳ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ಆದರೆ ಅಲ್ಲಲ್ಲಿ ಕೆಲವು ಶಿಲ್ಪಗಳು ಭಗ್ನವಾಗಿವೆ. ಪೂರ್ವ ಭಾಗದಲ್ಲಿ ಸಣ್ಣದಾದ ಮುಖಮಂಟಪವಿದೆ. ಇದು ಸುಮಾರು ಐದು ಅಡಿ ಎತ್ತರದ ಜಗತಿಯನ್ನು ಹೊಂದಿದೆ.

ಇದರ ಉತ್ತರ ಮತ್ತು ದಕ್ಷಿಣ ಭಾಗದಲ್ಲೂ ಕಟಾಂಜನವಿದೆ. ಇಲ್ಲಿಯೂ ಸಹ ಎರಡು ಹಂತದ ಶಿಲ್ಪಗಳನ್ನು ಕೆತ್ತಲಾಗಿದೆ. ಕೆಳಪಟ್ಟಿಕೆಯಲ್ಲಿ ನೃತ್ಯಗಾರ್ತಿಯರು ಹಾಗೂ ವಾದ್ಯವಾದಕರನ್ನು ಚಿತ್ರಿಸಲಾಗಿದೆ.

**ಭಿತ್ತಿ**

ದೇವಾಲಯದ ಹೊರಭಾಗದ ಭಿತ್ತಿಯನ್ನು ಶಿಲ್ಪಗಳಿಂದ ಅಲಂಕರಿಸಿದ್ದಾರೆ. (ಚಿತ್ರ – 3) ಪ್ರತಿಯೊಂದು ಶಿಲ್ಪದ ಅಂತರಗಳಲ್ಲಿ ತೆಳುವಾಗಿ ಸಣ್ಣದಾಗಿ ಎತ್ತರವಾಗಿರುವ ಅರೆಕಂಭಗಳನ್ನು ಕಾಣಬಹುದು. ಕಂಭದ ಮೇಲ್ಭಾಗದಲ್ಲಿ ಹಾಗೂ ಎರಡು ಕಂಭಗಳ ಮಧ್ಯಭಾಗದಲ್ಲಿ ಪದ್ಮದ ಚಿತ್ರವನ್ನು ರಚಿಸಿದ್ದಾರೆ. ಹೊಯ್ಸಳರ ಕಾಲದಲ್ಲಿಯ ಹಲವು ದೇವಾಲಯಗಳಲ್ಲಿ ಭಿತ್ತಿಶಿಲ್ಪಗಳನ್ನು ಕೆತ್ತಿರುವುದು ಸಾಮಾನ್ಯವಾಗಿದೆ. ಅದರಲ್ಲಿಯೂ ಸಹ ಹೊಯ್ಸಳ ಸ್ಥಪತಿಗಳು ಏನಾದರೂ ವಿಶೇಷತೆಯನ್ನು ತೋರಿಸಿರುವುದು ಅವರ ಕಲಾಪ್ರೌಢಿಮೆಗೆ ಸಾಕ್ಷಿಯಾಗಿದೆ. ಈ ದೇವಾಲಯದ ಭಿತ್ತಿಯ ಶಿಲ್ಪಗಳು ಬೇಲೂರು, ಹಳೇಬೀಡು, ಸೋಮನಾಥಪುರದ ದೇವಾಲಯಗಳ ರೀತಿಯಲ್ಲಿ ಒತ್ತೊತ್ತಾಗಿ ಅಲಂಕರಣವನ್ನು ಹೊಂದಿರದಿದ್ದರೂ ಸಹ ಭಿತ್ತಿಯ ಒಂದೊಂದು ಸಣ್ಣ ಭಾಗದಲ್ಲಿ ಒಂದು ಶಿಲ್ಪವನ್ನು ಕೆತ್ತಿದ್ದಾರೆ.[11]

**ದಕ್ಷಿಣ ಭಾಗದ ಭಿತ್ತಿಯಲ್ಲಿರುವ ಶಿಲ್ಪಗಳು**

ದಕ್ಷಿಣ ಭಾಗದ ಭಿತ್ತಿಯಲ್ಲಿರುವ ಮೊದಲ ಶಿಲ್ಪವು ಅಲಸ್ಯಕನ್ಯೆಯದಾಗಿದೆ. ಇವಳು ಅತಿಭಂಗಿಯಲ್ಲಿದ್ದು ಒಂದು ಕೈಯನ್ನು ಕೆಳಗೆ ಇಳಬಿಟ್ಟು ಮತ್ತೊಂದು ಕೈಯನ್ನು ತಲೆಯ ಮೇಲೆ ಎತ್ತಿದ್ದಾಳೆ ಮುಖದ ಭಾವವು ಸೌಮ್ಯವಾಗಿದ್ದು ಇವಳಿಗೆ ಆಭರಣಗಳನ್ನು ತೊಡಿಸಿ ಅಲಂಕರಿಸಿದ್ದಾರೆ, ಮೇಲ್ಬಾಗದಲ್ಲಿ ಲತಾಸುರುಳಿಯ ಕೆತ್ತನೆಯಿದೆ. ಇದರ ಪಕ್ಕದಲ್ಲಿ ಶುಕಭಾಷಿಣಿಯಿದ್ದಾಳೆ ಇವಳ ಬಲಕೈಯನ ಮೇಲೆ ಗಿಳಿಯೊಂದು ಕುಳಿತಿದೆ. ಇವಳನ್ನು ಆಭರಣಗಳಿಂದ ಅಲಂಕರಿಸಿದ್ದಾನೆ. ದಪ್ಪನೆಯ ದುಂಡಾದ ಸ್ತನಗಳು ಇಳಬಿಟ್ಟ ದೋತಿ ಇನ್ನಿತರ ಗಮನಾರ್ಹ ಅಂಶಗಳಿಂದ ಶಿಲ್ಪಿಯು ಯುವತಿಯ ನೈಜತೆಯನ್ನು ಚಿತ್ರಿಸಿದ್ದಾನೆ. ಇವಳ ಮೇಲ್ಭಗದಲ್ಲಿಯೂ ಸಹ ಲತಾಸುರುಳಿ ಬಳ್ಳಿಯನ್ನು ಕೆತ್ತಲಾಗಿದೆ. ನಂತರದಲ್ಲಿ ನೃತ್ಯತಾಂಡವ ಶಿವನ ಶಿಲ್ಪವಿದೆ. ಇವನು ಆರು ಕೈಗಳನ್ನು ಹೊಂದಿದ್ದು ಕೈಗಳಲ್ಲಿ ತ್ರಿಶೂಲ, ಡಮರು, ಅಕ್ಷಮಾಲ, ಖೇಟಕವಿದ್ದು ಮತ್ತೆರಡು ಕೈಗಳು ನೃತ್ಯಭಂಗಿಯಲ್ಲಿವೆ. ಬಲಭಾಗದಲ್ಲಿ ಗಣೇಶನಿದ್ದು ಎಡಭಾಗದಲ್ಲಿ ನಿಲುವಂಗಿ ಮತ್ತು ತಲೆಯ ಮೇಲೆ ಟೋಪಿಯನ್ನು ಧರಿಸಿರುವ ವಿಭಿನ್ನ ಶೈಲಿಯನ್ನು ಹೊಂದಿರುವ ಶಿಲ್ಪವಿದೆ. ಮೇಲ್ಭಾಗದಲ್ಲಿ ಪರಿವಾರ ದೇವತೆಗಳು ಹಾಗೂ ಭಕ್ತರನ್ನು ಚಿತ್ರಿಸಿದ್ದಾನೆ. ಶಿವನ ಮೇಲೆ ದ್ರಾವಿಡ ಮಾದರಿಯ

ವಿಮಾನವನ್ನು ಅಲಂಕರಿಸಿದ್ದಾನೆ. ವಿಮಾನದ ಮಧ್ಯದಲ್ಲಿ ಲತಾಸುರುಳಿಯ ಊರ್ಧ್ವಮುಖ ಪಟ್ಟಿಕೆಯಿದೆ. ನಂತರದಲ್ಲಿ ನಿಂತ ಭಂಗಿಯಲ್ಲಿರುವ ದಕ್ಷಿಣಾಮೂರ್ತಿಯ ಶಿಲ್ಪವಿದೆ. ದ್ವಿಭುಜವನ್ನು ಹೊಂದಿರುವ ಇವನು ಕೈಯಲ್ಲಿ ದಂಡ ಮತ್ತು ಬಟ್ಟಲನ್ನು ಹಿಡಿದಿದ್ದಾನೆ. ಉದ್ದನೆಯ ನಿಲುವಂಗಿಯನ್ನು ಧರಿಸಿದ್ದು ತಲೆಗೆ ಇಳಿಬಿಟ್ಟ ಟೋಪಿಯನ್ನು ಧರಿಸಿದ್ದಾನೆ. ಪ್ರಸ್ತುತ ಶಿಲ್ಪವು ಎಡದ ಕಾಲು ಮತ್ತು ಕೈಯಲ್ಲಿ ದಂಡವು ಭಗ್ನವಾಗಿದೆ. ಮೇಲ್ಭಾಗದಲ್ಲಿ ಲತಾಸುರುಳಿಯಿಂದ ಚಿತ್ರಿಸಲಾಗಿದೆ. ನಂತರದಲ್ಲಿ ವೇಣುಗೋಪಾಲನ ಶಿಲ್ಪವಿದೆ. ಬಲ ಭಾಗಕ್ಕೆ ಕೊಳಲನ್ನು ಹಿಡಿದು ನುಡಿಸುತ್ತಿದ್ದು ಇಲ್ಲಿಯೂ ಸಹ ಮೇಲ್ಭಾಗದಲ್ಲಿ ಲತಾಸುರುಳಿಯ ಅಲಂಕರಣವಿದೆ. ನಂತರದಲ್ಲಿ ತಾಳೆಯನ್ನು ಎರಡು ಕೈಯಲ್ಲಿ ಹಿಡಿದು ಅದನ್ನು ಭಾರಿಸುತ್ತ ನೃತ್ಯಮಾಡುತ್ತಿರುವ ನೃತ್ಯಗಾರನಿದ್ದಾನೆ. ನೃತ್ಯತಾಂಡವ ಶಿವನ ಶಿಲ್ಪವಿದ್ದು ಚತುರ್ಭುಜವನ್ನು ಹೊಂದ್ದಿದ್ದು ಒಂದು ಕೈಯಲ್ಲಿ ತ್ರಿಶೂಲ ಮತ್ತೊಂದು ಕೈಯಲ್ಲಿ ಡಮರುಗವನ್ನು ಹಿಡಿದಿದ್ದಾನೆ. ಬಲಭಾಗದ ಕೈಯನ್ನು ನೃತ್ಯಭಂಗಿಯಲ್ಲಿ ಇಳಿಬಿಟ್ಟಿದ್ದು ಬಲಗೈಯನ್ನು ಅಕ್ಷಮಾಲೆಯ ಜೊತೆಗೆ ಅಭಯ ಹಸ್ತವನ್ನು ತೋರಿಸಿದ್ದಾನೆ. ಮೇಲ್ಭಾಗದಲ್ಲಿ ವಿಮಾನದ ರಚನೆಯಿದ್ದು ಅದರಲ್ಲಿ ಅಮಲಕ ಶಿಲೆಯನ್ನು ಕೆತ್ತಲಾಗಿದೆ. ನಂತರದಲ್ಲಿ ಸರಸ್ವತಿಯ ಶಿಲ್ಪವಿದ್ದು, ಚತುರ್ಭುಜೆಯಾಗಿರುವ ಈಕೆಯ ಮುಂಭಾಗದ ಕೈಯಲ್ಲಿ ಅಕ್ಷಮಾಲಾ, ಪುಸ್ತಕವನ್ನು ಹಿಡಿದಿದ್ದಾಳೆ. ಹಿಂಭಾಗದ ಕೈಗಳು ಮುರಿದುಹೋಗಿವೆ. ಮೇಲ್ಭಾಗದಲ್ಲಿ ಸುಂದರವಾದ ವಿಮಾನದ ರಚನೆಯಿದೆ. ನಂತರದಲ್ಲಿ ಡಮರುಗವನ್ನು ಭಾರಿಸುತ್ತಿರುವವಳ ಶಿಲ್ಪವಿದೆ. ಇವಳನ್ನು ಸಾಮಾನ್ಯವಾಗಿ ದೇವತೆಯಂತೆ ಅಲಂಕರಿಸಿದ್ದು ಪ್ರಭಾವಳಿಯನ್ನು ಸಹ ಕೆತ್ತಲಾಗಿದೆ. ಮೇಲ್ಭಾಗದಲ್ಲಿ ಸುಂದರವಾದ ಶಿಖರವಿದೆ. ಅಂದಿನ ಕಾಲದಲ್ಲಿ ಸಂಗೀತಗಾರರಿಗೂ ಸಹ ಸಮಾಜದಲ್ಲಿ ಹೆಚ್ಚಿನ ಸ್ಥಾನಮಾನ ದೊರೆತಿರುವಂತೆ ಭಾಸವಾಗುತ್ತದೆ. ನಂತರದಲ್ಲಿ ಭೈರವಿಯ ಶಿಲ್ಪವಿದೆ. (ಚಿತ್ರ – 5) ಚತುರ್ಭುಜವನ್ನು ಹೊಂದಿರುವ ಭೈರವಿಯು ದ್ವಿಭಂಗಿಯಲ್ಲಿದ್ದು ಕೈಯಲ್ಲಿ ತ್ರಿಶೂಲ, ಡಮರು, ಖಡ್ಗವನ್ನು ಹಿಡಿದಿದ್ದು ಎಡಕೈಯಲ್ಲಿ ರುಂಡವನ್ನು ಹಿಡಿದಿದ್ದಾಳೆ. ಇವಳನ್ನು ಸರ್ವಾಲಂಕಾರಿಕವಾಗಿ ಕೆತ್ತಲಾಗಿದ್ದು ಮೇಲ್ಭಾಗದಲ್ಲಿ ಶಿಖರವನ್ನು ಚಿತ್ರಿಸಲಾಗಿದೆ. ತದನಂತರದಲ್ಲಿ ಕಂಭದ ಮೇಲೆ ವಿಮಾನದ ಅಲಂಕರಣವಿದ್ದು ಈ ಅಲಂಕರಣದ ಕೆಳಭಾಗದಲ್ಲಿ ಹಂಸವು ಅದರ ಮರಿಗಳಿಗೆ ಆಹಾರವನ್ನು ತೆಗೆದುಕೊಂಡು ಬಂದಿರುವುದನ್ನು, ಮತ್ತೊಂದು ಬದಿಯಲ್ಲಿ ಆ ಆಹಾರವನ್ನು ಮರಿಗಳಿಗೆ ತಿನ್ನಿಸುತ್ತಿರುವುದನ್ನು ಚಿತ್ರಿಸಲಾಗಿದೆ. ನಂತರದ ಇದೇ ರೀತಿಯ ಅಲಂಕರಣದ ಕೆಳ ಭಾಗದಲ್ಲಿ ಹಾವಾಡಿಗನು ಪುಂಗಿಯನ್ನು ಊದುತ್ತಾ ಹಾವನ್ನು ಆಡಿಸುತ್ತಿರುವುದನ್ನು ಚಿತ್ರಿಸಲಾಗಿದೆ ಇವೆಲ್ಲವೂ ಸಣ್ಣ ಶಿಲ್ಪಗಳು. ನಂತರದಲ್ಲಿ ಅತಿಭಂಗಿಯಲ್ಲಿರುವ

ನೃತ್ಯಗಾರ್ತಿಯ ಶಿಲ್ಪವಿದೆ. ಇವಳನ್ನು ಕಂಠಿಹಾರಗಳಿಂದ ಅಲಂಕರಿಸಲಾಗಿದೆ. ನಂತರದಲ್ಲಿ ನಾಟ್ಯಗಣಪತಿಯ ಶಿಲ್ಪವಿದೆ. ನಾಟ್ಯ ಭಂಗಿಯಲ್ಲಿರುವ ಗಣಪತಿಯು ಎಂಟು ಕೈಗಳನ್ನು ಹೊಂದಿದ್ದು ಪಾಶ, ಅಂಕುಶ, ಕೊಡಲಿ, ಪಾಶ, ಮೋಧಕ ಪಾತ್ರೆ, ಅರ್ಧದಂತ, ಪುಷ್ಪ ಮತ್ತು ಚಕ್ರವನ್ನು ಹಿಡಿದಿದ್ದಾನೆ. ಗಣಪತಿಯ ಎರಡು ಬದಿಯಲ್ಲಿಯೂ ಸಂಗೀತಗಾರರನ್ನು ಚಿತ್ರಿಸಲಾಗಿದೆ. ಕೆಳಭಾಗದಲ್ಲಿ ವಾಹನವಾದ ಮೂಷಿಕನನ್ನು ಚಿತ್ರಿಸಲಾಗಿದೆ. ರತಿಮನ್ಮಥರ ಶಿಲ್ಪವು ಸೂಕ್ಷ್ಮಕೆತ್ತನೆಯ ವಸ್ತ್ರವನ್ನು ಧರಿಸಿದ್ದು ಕಿರೀಟಗಳಿಂದ ಅಲಂಕರಿಸಿ ದೇಹಕ್ಕೆ ಅಲಂಕಾರಿಕ ಹಾರಗಳನ್ನು ಧರಿಸಿದ್ದಾರೆ. ಮೇಲ್ಭಾಗದಲ್ಲಿ ಸುಂದರವಾದ ಛತ್ರಿಯನ್ನು ಚಿತ್ರಿಸಲಾಗಿದೆ. ನಂತರದಲ್ಲಿ ಅರ್ಜುನನ ಶಿಲ್ಪವಿದೆ. ಅರ್ಜುನನು ಕೈಯಲ್ಲಿ ಬಿಲ್ಲು ಬಾಣವನ್ನು ಹಿಡಿದು ಮತ್ಸ್ಯಯಂತ್ರವನ್ನು ಭೇದಿಸುವ ಕಥಾ ನಿರೂಪಣಾ ಶಿಲ್ಪವಾಗಿದೆ. ಕೆಳಭಾಗದಲ್ಲಿರುವ ನೀರಿನಲ್ಲಿ ಮತ್ಸ್ಯದ ಪ್ರತಿಬಿಂಬವನ್ನು ನೋಡಿ ಬಿಲ್ಲಿನಿಂದ ಅದಕ್ಕೆ ಗುರಿಯಿಡುತ್ತಿದ್ದಾನೆ. ನಂತರದಲ್ಲಿ ತ್ರಿಮುಖ ಬ್ರಹ್ಮ ಮತ್ತು ಸರಸ್ವತಿಯ ಶಿಲ್ಪವಿದೆ. (ಚಿತ್ರ – 8) ಇವನು ಪದ್ಮ ಪೀಠದ ಮೇಲೆ ಕುಳಿತಿದ್ದು, ತ್ರಿಮುಖವನ್ನು ಹೊಂದಿದ್ದು, ಚೂಪಾದ ಗಡ್ಡವನ್ನು ಚಿತ್ರಿಸಲಾಗಿದೆ. ಬಲಕೈಯಲ್ಲಿ ಸೌಟು ಮತ್ತು ಅಕ್ಷಮಾಲೆಯನ್ನು ಹಿಡಿದಿದ್ದು ವರದ ಮುದ್ರೆಯನ್ನು ಹೊಂದಿದೆ. ಎಡಮೇಲಗೈಯಲ್ಲಿ ಪಾಷವನ್ನು ಹಿಡಿದಿರುವುದನ್ನು ಕಾಣಬಹುದು. ಮತ್ತೊಂದು ಕೈಯನ್ನು ಸರಸ್ವತಿಯ ಎಗಲ ಮೇಲೆ ಹಾಕಿಕೊಂಡಿದ್ದಾನೆ. ತಲೆಯಲ್ಲಿ ಸುಂದರವಾದ ಕಿರೀಟ, ಕರ್ಣ ಕುಂಡಲಗಳು, ಮಣಿಸರಗಳು, ಯಜ್ಞೋಪವೀತವನ್ನು ಧರಿಸಿದೆ. ತೊಡೆಯ ಮೇಲೆ ಸರಸ್ವತಿಯನ್ನು ಕುಳ್ಳಿರಿಸಿಕೊಂಡಿದ್ದಾನೆ. ಮೇಲ್ಭಾಗದಲ್ಲಿ ವಿಮಾನದ ರಚನೆಯಿದ್ದು ವಿಮಾನಕ್ಕೆ ಒತ್ತುಕೊಡಲು ಸಣ್ಣ ಕಂಭದ ಅಲಂಕರಣೆಯಿದೆ ಕಂಭಗಳಿಗೆ ಹೊಂದಿಕೊಂಡಂತೆ ಸಣ್ಣದಾದ ನೃತ್ಯಗಾರ್ತಿ ಹಾಗೂ ಡಮರುವನ್ನು ಭಾರಿಸುತ್ತಿರುವ ಮದನಿಕೆಯರ ಶಿಲ್ಪಗಳನ್ನು ಕೆತ್ತಲಾಗಿದೆ. ಪೀಠದಲ್ಲಿ ಹಂಸವನ್ನು ತೋರಿಸಲಾಗಿದೆ. ನಂತರದಲ್ಲಿ ಬಲಿವಾಮನನ ಶಿಲ್ಪ ಹಾಗೂ ತ್ರಿವಿಕ್ರಮನ ಶಿಲ್ಪವಿದೆ. ಇದು ವಿಷ್ಣುವಿನ ಅವತಾರದ ಶಿಲ್ಪ ಕೈಗಳಲ್ಲಿ ಶಂಖ, ಚಕ್ರ, ಗದ, ಪದ್ಮವನ್ನು ಹಿಡಿದಿದ್ದು ಬಲಗಾಲನ್ನು ಮೇಲಕ್ಕೆ ಎತ್ತಿರುವಂತೆ ತೋರಿಸಲಾಗಿದೆ. ಇವುಗಳ ಮೇಲ್ಭಾಗದಲ್ಲಿ ಛತ್ರಿಯ ರೀತಿಯ ಅಲಂಕರಣೆಯನ್ನು ತೋರಿಸಲಾಗಿದೆ. ಹರಿಹರನ ಶಿಲ್ಪವು ಸಮಭಂಗದಲ್ಲಿದ್ದು ಇದು ಅರ್ಧಭಾಗ ವಿಷ್ಣುವನ್ನು ಮತ್ತರ್ಧಭಾಗ ಶಿವನನ್ನು ಸೂಚಿಸುವಂತಹ ಶಿಲ್ಪವಾಗಿದೆ. ಬಲಗೈಯಲ್ಲಿ ತ್ರಿಶೂಲ, ಅಕ್ಷಮಾಲೆಯಿದ್ದು ಎಡಗೈಯಲ್ಲಿ ಚಕ್ರ, ಶಂಖಗಳಿವೆ. ಕೆಳಭಾಗದಲ್ಲಿ ನಂದಿ ಮತ್ತು ಗರುಡನನ್ನು ಚಿತ್ರಿಸಲಾಗಿದೆ.

**ಪಶ್ಚಿಮ ಭಿತ್ತಿಯ ಶಿಲ್ಪಗಳು**

ಪಶ್ಚಿಮ ಭಿತ್ತಿಯಲ್ಲಿ ಹಲವಾರು ಶಿಲ್ಪಗಳಿದ್ದು ಮೊದಲಿಗೆ ನಾಟ್ಯ ಸರಸ್ವತಿಯ ಶಿಲ್ಪವಿದೆ. (ಚಿತ್ರ – 10) ಬಲಭಾಗದ ಕೈಗಳಲ್ಲಿ ಅಕ್ಷಮಾಲೆ, ಬಹು ಬೀಜಫಲ, ಅಂಕುಶವಿದ್ದು ಎಡಕೈಗಳಲ್ಲಿ ಪಾಷ, ಪದ್ಮ, ಮತ್ತು ಪುಸ್ತಕಗಳನ್ನು ಹಿಡಿದಿದ್ದಾಳೆ. ಮತ್ತೆರಡು ಕೈಗಳು ನಾಟ್ಯಭಂಗಿಯಲ್ಲಿವೆ ಈ ಶಿಲ್ಪದ ಮೇಲ್ಭಾಗದಲ್ಲಿ ಶಿಖರದ ರಚನೆಯಿದೆ. ಕೆಳಗೆ ಮೃದಂಗ ಹಾಗೂ ಡೋಲನ್ನು ಬಾರಿಸುತ್ತಿರುವ ಇಬ್ಬರು ವ್ಯಕ್ತಿಗಳ ಸಣ್ಣ ಶಿಲ್ಪಗಳಿವೆ. ನಂತರದಲ್ಲಿ ಸೂರ್ಯನ ಶಿಲ್ಪವಿದೆ. ಇಲ್ಲಿ ಏಳುಅಶ್ವಗಳ ಚಿತ್ರವಿರುವ ರಥದ ಮೇಲ್ಭಾಗದಲ್ಲಿ ಸಮಭಂಗಿಯಲ್ಲಿ ನಿಂತಿದ್ದಾನೆ. ಎರಡು ಕೈಗಳಲ್ಲಿ ಪದ್ಮವನ್ನು ಹಿಡಿದಿದ್ದಾನೆ. ಇಕ್ಕೆಲಗಳಲ್ಲಿ ಬಿಲ್ಲು ಬಾಣವನ್ನು ಹಿಡಿದಿರುವ ಉಷೆ ಹಾಗೂ ಪ್ರತ್ಯುಷೆಯರನ್ನು ಚಿತ್ರಿಸಲಾಗಿದೆ. ಇದರ ಪಕ್ಕದಲ್ಲಿ ವಿಷ್ಣುವು ಗರುಡ ಪೀಠದ ಮೇಲೆ ನಿಂತಿದ್ದಾನೆ. ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗದ ಮತ್ತು ಪದ್ಮವನ್ನು ಹಿಡಿದಿರುವುದನ್ನು ಕಾಣಬಹುದು. ಬಹಳ ಅಲಂಕಾರಿಕವಾಗಿ ಕಾಣುವ ಇವನಿಗೆ ತ್ರಿಕೋನಾಕಾರದ ಕಿರೀಟವನ್ನು ಹಾಕಲಾಗಿದೆ. ಹಲವು ಬಗೆಯ ಕಂಠಿಹಾರಗಳಿಂದ ಅಲಂಕರಿಸಿದ್ದಾರೆ. ಪದ್ಮಾಸನದಲ್ಲಿ ಕುಳಿತಿರುವ ಶಿವನಿದ್ದು ತೊಡೆಯ ಮೇಲೆ ಪಾರ್ವತಿಯನ್ನು ಕುಳ್ಳಿರಿಸಿಕೊಂಡಿದ್ದಾನೆ. ಶಿವ–ಪಾರ್ವತಿಯರಿಬ್ಬರು ಬಲಕಾಲನ್ನು ಇಳಬಿಟ್ಟು ಎಡಕಾಲನ್ನು ಮಡಿಚಿಕೊಂಡಿದ್ದಾರೆ. ಹಿಂಬದಿಯ ಕೈಯಲ್ಲಿ ತ್ರಿಶೂಲ ಢಮರನ್ನು ಹಿಡಿದಿದ್ದು ಬಲಕೈಯಲ್ಲಿ ಅಕ್ಷಮಾಲೆಯ ಜೊತೆಗೆ ಅಭಯ ಮುದ್ರೆಯನ್ನು ಹೊಂದಿದೆ. ಎಡಕೈಯಲ್ಲಿ ಪಾರ್ವತಿಯ ಬೆನ್ನನ್ನು ಬಳಸಿ ಹಿಡಿದುಕೊಂಡಿದೆ. ಪಾರ್ವತಿಯು ದ್ವಿಭುಜವನ್ನು ಹೊಂದಿದ್ದು ಬಲಗೈ ಅಭಯ ಹಸ್ತವನ್ನು ಹೊಂದಿದ್ದು ಎಡಗೈಯಲ್ಲಿ ಫಲವನ್ನು ಹಿಡಿದಿದ್ದಾಳೆ. ಇವರ ಮೇಲ್ಭಾಗದಲ್ಲಿ ಸಣ್ಣದಾದ ಕಪೋತದ ಲಕ್ಷಣಗಳೊಂದಿಗೆ ವಿಮಾನದ ರಚನೆಯಿದೆ. ನಂತರದಲ್ಲಿ ಅರ್ಧನಾರೀಶ್ವರನ ಶಿಲ್ಪವಿದೆ. ಹೆಸರೆ ಸೂಚಿಸುವಂತೆ ನಾರೀ–ಪಾರ್ವತಿ, ಈಶ್ವರ–ಶಿವ ಅರ್ಧ ಒಂದರಲ್ಲಿ ಅರ್ಧಭಾಗ. ಇಲ್ಲಿ ಅರ್ಧಭಾಗ ಶಿವನ ರೂಪವನ್ನು ಮತ್ತರ್ಧಭಾಗ ಪಾರ್ವತಿಯನ್ನು ಚಿತ್ರಿಸಲಾಗಿದೆ.[12] ಇದು ಸಮಭಂಗದಲ್ಲಿದೆ. ಶಿವನ ಕೈಯಲ್ಲಿ ತ್ರಿಶೂಲವಿದ್ದರೆ ಪಾರ್ವತಿಯ ಕೈಯಲ್ಲಿ ಡಮರು ಇದೆ ಇದರ ಮೇಲೆ ಪುಟ್ಟದಾದ ಲಿಂಗವನ್ನು ಚಿತ್ರಿಸಲಾಗಿದೆ. ನಂತರದಲ್ಲಿ ದ್ವಿಭುಜವನ್ನು ಹೊಂದಿರುವ ಶಿವ, ಪಕ್ಕದಲ್ಲಿ ಚತುರ್ಭುಜವನ್ನು ಹೊಂದಿರುವ ಕೇಶವ ಶಿಲ್ಪವಿದೆ. ಕೆಳಗೆ ಗರುಡನನ್ನು ಚಿತ್ರಿಸಲಾಗಿದ್ದು ಸಮಭಂಗದಲ್ಲಿದ್ದಾನೆ. ಕೈಯಲ್ಲಿ ಶಂಖ, ಚಕ್ರ, ಗದ ಮತ್ತು ಪದ್ಮವನ್ನು ಹಿಡಿದಿದ್ದಾನೆ. ಸುಂದರವಾದ ಕಿರೀಟವನ್ನು ಹೊಂದಿದ್ದು ಆಭರಣಗಳಿಂದ ಅಲಂಕೃತವಾಗಿದ್ದಾನೆ. ಇವನನ್ನು ಮಂಟಪದ ರಚನೆಯೊಳಗೆ ಕೆತ್ತಲಾಗಿದ್ದು ಮೇಲ್ಭಾಗದಲ್ಲಿ ಅಲಂಕಾರಿಕ ವಿಮಾನವಿದೆ.

**ಉತ್ತರ ಭಾಗದ ಭಿತ್ತಿಯಲ್ಲಿನ ಶಿಲ್ಪಗಳು**

ದೇವಾಲಯದ ಉತ್ತರ ಭಾಗದ ಭಿತ್ತಿಯಲ್ಲಿ ಮೊದಲಿಗೆ ಗಜಸಂಹಾರ ಮರ್ಧಿನಿಯ ಶಿಲ್ಪ ಕಂಡುಬರುತ್ತದೆ. ಈ ಶಿಲ್ಪವು ನಾಲ್ಕು ಕೈಗಳನ್ನು ಹೊಂದಿದ್ದು ಕೈಯಲ್ಲಿ ತ್ರಿಶೂಲ, ಡಮರು, ಗದೆ, ಶಂಖವನ್ನು ಹಿಡಿದಿದ್ದಾಳೆ. ನೃತ್ಯಭಂಗಿಯಲ್ಲಿರುವ ಈ ಶಿಲ್ಪದ ಕೆಳಭಾಗದಲ್ಲಿ ಆನೆಯ ತಲೆಯನ್ನು ಚಿತ್ರಿಸಲಾಗಿದೆ. ಬಲಭಾಗದಲ್ಲಿ ಗಣೇಶ, ನಂದಿ, ಕಾರ್ತಿಕೇಯನ ಸಣ್ಣದಾದ ಶಿಲ್ಪಗಳಿವೆ. ಮೇಲ್ಭಾಗದಲ್ಲಿ ವಿಮಾನದ ರಚನೆಯಿದೆ. ಇದರ ಪಕ್ಕದಲ್ಲಿ ವಿಷ್ಣುವಿನ ಶಿಲ್ಪವಿದೆ. ಸಮಭಂಗಿಯಲ್ಲಿರುವ ವಿಷ್ಣುವು ಚತುರ್ಭುಜವನ್ನು ಹೊಂದಿದ್ದು ಕೈಯಲ್ಲಿ ಶಂಖ, ಚಕ್ರ, ಗದ ಮತ್ತು ಪದ್ಮವನ್ನು ಹಿಡಿದಿದ್ದಾನೆ. ನಂತರದಲ್ಲಿ ದರ್ಪಣ ಸುಂದರಿಯ ಶಿಲ್ಪವಿದೆ. ದ್ವಿಭಂಗಿಯಲ್ಲಿ ನಿಂತಿರುವ ಈಕೆಯನ್ನು ಬಹಳ ಸುಂದರವಾಗಿ ಅಲಂಕರಿಸಲಾಗಿದೆ. ಎಡಭಾಗದ ಕೈಯಲ್ಲಿ ಕನ್ನಡಿಯನ್ನು ಮುಖದ ನೇರಕ್ಕೆ ಹಿಡಿದಿದ್ದು ಬಲಕೈಯಲ್ಲಿ ತಲೆಯನ್ನು ಸರಿಮಾಡಿಕೊಳ್ಳುವಂತೆ ಚಿತ್ರಿಸಲಾಗಿದೆ. ಇವಳ ಪಕ್ಕದಲ್ಲಿ ಲಕ್ಷ್ಮೀನಾರಾಯಣನ ಶಿಲ್ಪವಿದೆ. (ಚಿತ್ರ – 9) ಸುಖಾಸನದಲ್ಲಿ ಕುಳಿತಿರುವ ನಾರಾಯಣನು ತೊಡೆಯ ಮೇಲೆ ಲಕ್ಷ್ಮಿಯನ್ನು ಕುಳ್ಳಿರಿಸಿಕೊಂಡಿದ್ದಾನೆ. ಹಿಂಬದಿಯ ಕೈಯಲ್ಲಿ ಶಂಖ, ಚಕ್ರವನ್ನು ಹಿಡಿದಿದ್ದು ಮುಂಭಾಗದ ಬಲ ಕೈಯನ್ನು ವರದ ಹಸ್ತದಲ್ಲಿ ತೋರಿಸಿದ್ದು ಎಡಗೈಯನ್ನು ಲಕ್ಷ್ಮಿಯ ಹೆಗಲ ಮೇಲೆ ಹಾಕಿಕೊಂಡಿರುವುದನ್ನು ಕಾಣಬಹುದು. ಲಕ್ಷ್ಮಿಯು ತನ್ನ ಎಡಗೈಯಲ್ಲಿ ಬೀಜ ಪೂರ ಫಲವನ್ನು ಹಿಡಿದಿದ್ದಾಳೆ. ಇಬ್ಬರು ಸಹ ಬಲಕಾಲನ್ನು ಕೆಳಗೆ ಇಳಿಬಿಟ್ಟು ಎಡಕಾಲನ್ನು ಮಡಿಚಿಕೊಂಡಿದ್ದಾರೆ. ಮೇಲ್ಭಾಗದಲ್ಲಿ ವಿಮಾನದ ರಚನೆಯಿದೆ. ನಂತರದಲ್ಲಿ ರತಿ–ಮನ್ಮಥರನ್ನು ಚಿತ್ರಿಸಲಾಗಿದೆ. ಇಬ್ಬರನ್ನು ಬೇರೆ ಬೇರೆಯಾಗಿ ಚಿತ್ರಿಸಿದೆ. ಇಬ್ಬರೂ ಸಹ ಸಮಭಂಗಿಯಲ್ಲಿದ್ದು ಮನ್ಮಥನ ಬಲಗೈಯಲ್ಲಿ ಕಬ್ಬಿನ ಜಲ್ಲೆಯನ್ನು ಹಿಡಿದಿದ್ದಾನೆ. ರತಿಯ ಎಡಕೈಯಲ್ಲಿ ಪುಷ್ಪಗುಚ್ಛವನ್ನು ಹಿಡಿದಿದ್ದಾಳೆ. ನಂತರದಲ್ಲಿ ಮಹಿಷಮರ್ಧಿನಿಯ ಶಿಲ್ಪವಿದೆ. ಇದು ಅಷ್ಟ ಭುಜಗಳನ್ನು ಹೊಂದಿದ್ದು ಕೈಯಲ್ಲಿ ಖಡ್ಗ, ಬಿಲ್ಲು, ಬಾಣ, ಗುರಾಣಿ ಮತ್ತು ಬಟ್ಟಲುಗಳನ್ನು ಹಿಡಿದಿದ್ದಾಳೆ. ಶಿಲ್ಪದ ಕೆಳಗೆ ಕೋಣನನ್ನು ಚಿತ್ರಿಸಿದ್ದು ಅದನ್ನು ಒಂದು ಕೈಯಲ್ಲಿ ಹಿಡಿದಿದ್ದು, ಮತ್ತೊಂದು ಕೈಯಿಂದ ಭರ್ಜಿಯಿಂದ ಚುಚ್ಚಿದ್ದಾಳೆ. ಎಡಕಾಲನ್ನು ಮಹಿಷನ ಮೇಲೆ ಇಟ್ಟಿದ್ದಾಳೆ. ನಂತರದಲ್ಲಿ ಉಗ್ರನರಸಿಂಹನ ಶಿಲ್ಪವಿದೆ. ನರಸಿಂಹನು ಪೀಠದ ಮೇಲೆ ಕುಳಿತಿದ್ದು ಹಿರಣ್ಯಕಶಿಪುವನ್ನು ತೊಡೆಯ ಮೇಲೆ ಇಟ್ಟುಕೊಂಡು ಅವನ ಹೊಟ್ಟೆಯನ್ನು ಬಗೆದು ಕರಳನ್ನು ಕೊರಳಿಗೆ ಹಾಕಿಕೊಂಡಿದ್ದಾನೆ. ಕೈಯಲ್ಲಿಯೂ ಸ್ವಲ್ಪ ಸುತ್ತುಕೊಂಡಿದ್ದಾನೆ. ಇನ್ನೆರಡು ಕೈಗಳಲ್ಲಿ ಚಕ್ರ, ಶಂಖವನ್ನು ಹಿಡಿದಿದ್ದಾನೆ. ಕೆಳಭಾಗದಲ್ಲಿ ಗರುಡ, ಪ್ರಹ್ಲಾದನ ಸಣ್ಣ ಶಿಲ್ಪವನ್ನು ಚಿತ್ರಿಸಲಾಗಿದೆ.

ನಂತರದಲ್ಲಿ ಭೈರವನ ಶಿಲ್ಪವಿದೆ. ಕೈಯಲ್ಲಿ ತ್ರಿಶೂಲ ಢಮರನ್ನು ಹಿಡಿದಿದ್ದಾನೆ. ಕೆಳಭಾಗದಲ್ಲಿ ನಾಯಿಯನ್ನು ಕೆತ್ತಿರುವ ಶಿಲ್ಪವನ್ನು ಕಾಣಬಹುದು. ನಂತರದಲ್ಲಿ ಗೋವರ್ಧನಗಿರಿಧಾರಿಯ ಶಿಲ್ಪವಿದೆ. ಬಲಗೈಯನ ಅಂಗೈಯನ ಮೇಲೆ ಗೋವರ್ಧನ ಗಿರಿಭಾರವನ್ನು ಎತ್ತಿ ಕೊಂಡಿದ್ದಾನೆ. ಅಕ್ಕ ಪಕ್ಕದಲ್ಲಿ ಗೋಪಿಕೆಯರು, ಗೋವುಗಳು ಇನ್ನಿತರ ಪ್ರಾಣಿ ಪಕ್ಷಿಗಳಿಂದ ಅಲಂಕರಿಸಲಾಗಿದೆ. ಮೇಲ್ಭಾಗದಲ್ಲಿ ವಿಮಾನದ ರಚನೆಯಿದೆ. ನಂತರದಲ್ಲಿ ಶಂಖ, ಚಕ್ರ, ಗದ, ಪದ್ಮದಾರಿಯಾದ ವಿಷ್ಣುವಿನ ಶಿಲ್ಪವಿದೆ. ಇವನು ಸಮಭಂಗದಲ್ಲಿ ನಿಂತಿದ್ದಾನೆ. ಇದರ ಪಕ್ಕದಲ್ಲಿ ಭೈರವಿಯ ಶಿಲ್ಪವಿದೆ ಕೈಯಲ್ಲಿ ತ್ರಿಶೂಲ, ಡಮರುವನ್ನು ಹಿಡಿದಿದ್ದಾಳೆ. ಇದರ ಪಕ್ಕದಲ್ಲಿ ಸೂರ್ಯ ಶಿಲ್ಪವಿದ್ದು ಹಿಂದೆ ವಿವರಿಸಿದ ಲಕ್ಷಣವನ್ನೆ ಇದೂ ಸಹ ಹೊಂದಿದೆ. ನಂತರದಲ್ಲಿ ದ್ವಿಭಂಗಿಯಲ್ಲಿರುವ ನೃತ್ಯಗಾರ್ತಿ ಹಾಗೂ ಅವಳ ಪಕ್ಕದಲ್ಲಿ ತ್ರಿಭಂಗಿಯಲ್ಲಿರುವ ನೃತ್ಯಗಾರ್ತಿಯರ ಶಿಲ್ಪಗಳಿವೆ. ಇವುಗಳನ್ನು ಕಂಠಿಹಾರಗಳಿಂದ ಅಲಂಕಾರಿಕವಾಗಿ ಚಿತ್ರಿಸಲಾಗಿದೆ. ನಂತರದಲ್ಲಿ ಭೂವರಾಹ ಮೂರ್ತಿಯಿದೆ. ಇದು ಚತುರ್ಭುಜವನ್ನು ಹೊಂದಿದ್ದು ಹಿಂಬದಿಯ ಕೈಗಳಲ್ಲಿ ಗದೆ ಮತ್ತು ಶಂಖವನ್ನು ಹಿಡಿದಿದ್ದು ಮತ್ತೆರಡು ಕೈಗಳನ್ನು ನಡುವಿನ ಭಾಗಕ್ಕೆ ಇಟ್ಟಿದ್ದಾನೆ. ಮುಖವು ವರಾಹದ ಲಕ್ಷಣವನ್ನು ಹೊಂದಿದ್ದು ಭುಜದ ಮೇಲೆ ಪೃಥ್ವಿಯನ್ನು ಕುಳ್ಳಿರಿಸಿಕೊಂಡಿದ್ದಾನೆ. ಕೆಳಭಾಗದಲ್ಲಿ ಗರುಡನು ಅಂಜಲಿ ಮುದ್ರೆಯಲ್ಲಿದ್ದಾನೆ. ಭೂವರಾಹ ಮೂರ್ತಿಯ ಮೇಲ್ಭಾಗದಲ್ಲಿ ವಿಮಾನದ ರಚನೆಯಿದೆ. ನಂತರದಲ್ಲಿ ಮೋಹಿನಿ ಹಾಗು ದರ್ಪಣ ಸುಂದರಿಯರನ್ನು ಚಿತ್ರಿಸಿದ್ದಾನೆ.

ಈ ಭಿತ್ತಿಶಿಲ್ಪಗಳು ಶಿಲ್ಪ ಕಲಾ ಪ್ರೌಢಿಮೆಯನ್ನು ವ್ಯಕ್ತಪಡಿಸಿದರೂ ಸಹ ಅವುಗಳನ್ನು ಕೆತ್ತಿದ ಶಿಲ್ಪಿಗಳ ಹೆಸರುಗಳನ್ನು ತಿಳಿಸಲು ಸೋತಿವೆ. ಆದರೆ ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ ದೇವಾಲಯದ ಭಿತ್ತಿಶಿಲ್ಪಗಳ ಕೆಳಭಾಗದಲ್ಲಿ ಶಿಲ್ಪಿಗಳ ಹೆಸರು ಹಾಗೂ ಶಿಲ್ಪದ ಹೆಸರನ್ನು ಕೆತ್ತಲಾಗಿದೆ.

**ಶಿಖರ**

ದೇವಾಲಯದ ಶಿಖರವು ಹೊಯ್ಸಳರ ಕಾಲದ ವೇಸರ ಶೈಲಿಯನ್ನು ಹೊಂದಿದೆ. (ಚಿತ್ರ – 2) ಶಿಖರವು ಮೂರು ಹಂತಗಳಲ್ಲಿ ಶಾಲಾ, ಭದ್ರಶಾಲಾವನ್ನು ಹೊಂದಿದೆ. ಪ್ರತಿಯೊಂದು ಹಂತದಲ್ಲಿಯೂ ಸಹ ದಂತಪಂಕ್ತಿಯ ಅಲಂಕರಣೆಯಿದೆ. ಶಿಖರದ ಕೊನೆಯ ಭಾಗದಲ್ಲಿ ಅಮಲಕದ ರೀತಿಯ ಸ್ತೂಪಿಯಿದ್ದು ಇದೂ ಸಹ ನಕ್ಷತ್ರಾಕಾರವನ್ನು ಹೊಂದಿದ್ದು ಪ್ರತಿಯೊಂದು ದಿಕ್ಕಿನಲ್ಲಿಯೂ ಸಹ ವ್ಯಾಳದ ಬಾಯಿಂದ ಹೊರಟಿರುವ ಲತಾ ಸುರುಳಿಗಳನ್ನು ಅಲಂಕರಿಸಲಾಗಿದೆ. ಮೇಲ್ಭಾಗದಲ್ಲಿ ಕಳಸವಿದೆ. ಅಮಲಕದ ಮೇಲೆ ಆಗ್ನೇಯ ಮೂಲೆಯನ್ನು ಹೊರತುಪಡಿಸಿ ಉಳಿದ ಮೂರು ಮೂಲೆಗಳಲ್ಲಿಯೂ ಸಹ ಶಿವನ ವಾಹನವಾದ ನಂದಿಯ ಶಿಲ್ಪವಿದೆ. ಆಗ್ನೇಯ ದಿಕ್ಕಿನಲ್ಲಿದ್ದ

ನಂದಿ ಬಹುಶಃ ಮುರಿದುಹೋಗಿರಬಹುದು. ದಕ್ಷಿಣ ಭಾಗದ ಭದ್ರಶಾಲಾದಲ್ಲಿ ಉಗ್ರನರಸಿಂಹ, ತ್ರಿಮುಖ ಬ್ರಹ್ಮ, ನಾಟ್ಯಸರಸ್ವತಿಯರ ಶಿಲ್ಪಗಳಿವೆ. ಪಶ್ಚಿಮ ಭಾಗದಲ್ಲಿ ಪಾರ್ವತಿ, ಕಾಳಭೈರವ, ನಾಟ್ಯಸರಸ್ವತಿಯ ಶಿಲ್ಪಗಳಿವೆ. ಈ ಭಾಗದಲ್ಲಿರುವ ಅಲಂಕರಣೆಯು ಅಪೂರ್ಣವಾಗಿವೆ. ಉತ್ತರ ಭಾಗದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಪಾರ್ವತಿ, ಸಮಭಂಗಿಯಲ್ಲಿರುವ ಶಿವ, ನೃತ್ಯ ತಾಂಡವ ಶಿವನ ಶಿಲ್ಪಗಳಿವೆ. ಶಿಖರದ ಮುಂಭಾಗದಲ್ಲಿ ಶುಕನಾಸವಿದ್ದು ಇದು ಶಿಖರದ ಎರಡನೆ ಹಂತದ ಸಮಕ್ಕೆ ಇದೆ. ಇದರ ಮುಂಭಾಗದಲ್ಲಿ ವ್ಯಾಳ ಮುಖದಿಂದ ಹರಡಿರುವ ಲತಾಬಳ್ಳಿಗಳ ಅಲಂಕರಣವನ್ನು ರಚಿಸಲಾಗಿದೆ.

**ನಂದಿಮಂಟಪ**

ದೇವಾಲಯದ ಮುಂಭಾಗದಲ್ಲಿ ಹೊರಭಾಗ ಚೌಕಾಕಾರವಾಗಿದ್ದು ಒಳಭಾಗವು ಘನಾಕೃತಿಯನ್ನು ಹೊಂದಿದೆ. ಮಧ್ಯದಲ್ಲಿ ಸುಮಾರು 4 ಅಡಿ ಎತ್ತರದ ನಂದಿಶಿಲ್ಪವಿದೆ. ಇದನ್ನು ಬಹಳ ಸುಂದರವಾಗಿ ಅಲಂಕರಿಸಲಾಗಿದೆ. ಇದರ ಅಕ್ಕ ಪಕ್ಕದಲ್ಲಿ ಒಂದು ಅಡಿ ಎತ್ತರದ ಎರಡು ನಂದಿ ಶಿಲ್ಪಗಳಿವೆ. ನಂದಿಯ ಹಿಂಭಾಗದಲ್ಲಿ ಅಂದರೆ ನಂದಿಮಂಟಪದ ಒಳಭಾಗಕ್ಕೆ ಹೊಂದಿಕೊಂಡಂತೆ ನವರಂಗದಲ್ಲಿರುವ ದೇವಕೋಷ್ಠದಲ್ಲಿ ಇರುವಂತೆ ಇಲ್ಲಿಯೂ ಸಹ ವಿಮಾನ ಅಲಂಕರಣವಿರುವ ದೇವಕೋಷ್ಠವಿದೆ. ಕೋಷ್ಠದಲ್ಲಿ ಸಮಭಂಗಿಯಲ್ಲಿರುವ ಸೂರ್ಯನ ಶಿಲ್ಪವಿದೆ. ಸೂರ್ಯನು ಏಳುಕುದುರೆಗಳ ಚಿತ್ರವಿರುವ ಪೀಠದ ಮೇಲ್ಭಾಗದಲ್ಲಿ ನಿಂತಿದ್ದಾನೆ. ಎರಡು ಕೈಗಳಲ್ಲಿ ಪದ್ಮದ ಮೊಗ್ಗನ್ನು ಹಿಡಿದಿದ್ದಾನೆ. ಸೂರ್ಯನಿಗೆ ಕಿರೀಟವನ್ನು ಧರಿಸಿದ್ದು ಕಂಠಾಭರಣಗಳಿಂದ ಹಾಗೂ ಸೂಕ್ಷ್ಮ ಕೆತ್ತನೆಯಿರುವ ಅಲಂಕಾರಿಕ ವಸ್ತ್ರದಿಂದ ಅಲಂಕರಿಸಿದ್ದಾರೆ. ಇದಕ್ಕೆ ಸುಂದರವಾದ ಪ್ರಭಾವಳಿಯಿದ್ದು ಕೆಳಭಾಗದಲ್ಲಿ ಬಿಲ್ಲು ಬಾಣವನ್ನು ಹಿಡಿದಿರುವ ಉಷೆ ಹಾಗೂ ಪ್ರತ್ಯುಷೆಯರನ್ನು ಸಣ್ಣದಾಗಿ ಚಿತ್ರಿಸಲಾಗಿದೆ. ಒಳಸುತ್ತಲೂ ಸ್ವಲ್ಪ ಎತ್ತರವಾದ ಒಳಜಗತಿಯಿದೆ. ಸುತ್ತಲೂ ಕಂಭಗಳಿದ್ದು ಇವುಗಳಲ್ಲಿ ಕೆಲವು ದುಂಡಗಿವೆ, ಕೆಲವು ಅಷ್ಟಕೋನಾಕೃತಿಯನ್ನು ಮತ್ತೆ ಕೆಲವು ಷೋಡಶಾಕೃತಿಯಲ್ಲಿವೆ. (ಚಿತ್ರ – 22) ಭುವನೇಶ್ವರಿಯು ಮೂಲೆ ಕಲ್ಲುಗಳಗಳಿಂದ ಅಲಂಕೃತವಾಗಿದ್ದು ಮಧ್ಯದಲ್ಲಿ ಪದ್ಮದ ಅಲಂಕರಣವಿದೆ.

**ಗರ್ಭಗೃಹ**

ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಸುಮಾರು 2 ಅಡಿ ಎತ್ತರದ ಪೀಠದ ಮೇಲೆ 1 ಅಡಿ ಎತ್ತರದ ಲಿಂಗವಿದೆ. ಭುವನೇಶ್ವರಿಯು ಪದ್ಮದ ಅಲಂಕರಣೆಯನ್ನು ಹೊಂದಿದೆ. ಇಲ್ಲಿನ ದ್ವಾರಬಂಧವನ್ನು ಬಹಳ ಚೆನ್ನಾಗಿ ಅಲಂಕರಿಸಲಾಗಿದೆ. ಇದು ಏಳು ಅಲಂಕರಣ ಪಟ್ಟಿಕೆಯನ್ನು

ಹೊಂದಿದೆ. ಒಂದು ಪಟ್ಟಿಕೆಯಲ್ಲಿ ಹೆಚ್ಚಿನ ರೀತಿಯಲ್ಲಿ ಉಬ್ಬಿರುವ ಅರೆಕಂಭಗಳ ರಚನೆಯಿದೆ. ಉಳಿದ ಪಟ್ಟಿಕೆಗಳನ್ನು ಲತಾ ಸುರುಳಿ ಬಳ್ಳಿ ಹಾಗೂ ಇನ್ನಿತರ ಅಲಂಕರಣದಿಂದ ಚಿತ್ರಿಸಲಾಗಿದೆ. ಅರೆಕಂಭಗಳ ಮೇಲ್ಭಾಗದಲ್ಲಿ ಎರಡು ಬದಿಯಲ್ಲೂ ಸಹ ಸಣ್ಣದಾದ ಮದನಿಕೆಯರ ಶಿಲ್ಪಗಳನ್ನು ಕೆತ್ತಲಾಗಿದೆ. ಇದು ನವರಂಗದಲ್ಲಿರುವ ಮದನಿಕ ಶಿಲ್ಪದ ರೀತಿಯಲ್ಲಿಯೇ ಇದೆ. ದ್ವಾರದ ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರ ಚಿತ್ರಗಳಿವೆ. ದ್ವಾರ ಪಾಲಕರ ಪಕ್ಕದಲ್ಲಿ ರತಿ–ಮನ್ಮಥರ ಚಿತ್ರಗಳಿವೆ. ಮನ್ಮಥನು ಕೈಯಲ್ಲಿ ಕಬ್ಬಿನ ಜಲ್ಲೆಯನ್ನು ಹಿಡಿದಿದ್ದಾನೆ, ಪಕ್ಕದಲ್ಲಿ ನಂದಿಯ ಮುಖ ಮನುಷ್ಯನ ದೇಹವನ್ನು ಹೊಂದಿರುವ ಶಿಲ್ಪವಿದೆ. (ಚಿತ್ರ – 6) ಈ ರೀತಿಯ ಶಿಲ್ಪಗಳನ್ನು ದ್ವಾರದ ಎರಡು ಬದಿಯಲ್ಲೂ ಕಾಣಬಹುದು. ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯನ್ನು ಕೆತ್ತಲಾಗಿದೆ. ಇದರ ಮೇಲ್ಭಾಗದಲ್ಲಿ ಐದು ಸಣ್ಣ ಸಣ್ಣ ಬುರುಜುಗಳಿಂದ ಅಲಂಕರಿಸಲಾಗಿದೆ. ಮಧ್ಯದ ಬುರುಜಿನ ಮಧ್ಯಭಾಗದಲ್ಲಿ ತ್ರಿಮುಖ ಬ್ರಹ್ಮನ ಶಿಲ್ಪವಿದೆ.[13]

**ಸುಖನಾಸಿ**

ಸುಖನಾಸಿಯು ಗರ್ಭಗೃಹದಷ್ಟೇ ವಿಸ್ತೀರ್ಣವನ್ನು ಹೊಂದಿದೆ. ಇದು ಹೆಚ್ಚಿನ ಅಲಂಕರಣವನ್ನು ಹೊಂದಿಲ್ಲದ್ದಾಗಿದೆ. ಭುವನೇಶ್ವರಿಯಲ್ಲಿ ಚೌಕಾಕಾರದ ಪಟ್ಟಿಕೆಯ ಒಳಗೆ ಒಂಭತ್ತು ಪದ್ಮದ ಅಲಂಕರಣೆಯನ್ನು ಹೊಂದಿದೆ. ಶುಕನಾಸಿಯ ನಾಲ್ಕು ಮೂಲೆಗಳಲ್ಲಿ ಭಿತ್ತಿಗೆ ಹೊಂದಿಕೊಂಡಂತೆ ಮೂವತ್ತೆರಡು ಅಲಗುಗಳಿಂದ ರಚಿತವಾದ ಕೆಳಮುಖ ಬೋದಿಗೆಯ ಅಲಂಕರಣವಿರುವ ಕಂಭಗಳಿವೆ. ಇಲ್ಲಿನ ಮೂಲ ದ್ವಾರಬಂದವು ಶಿಥಿಲವಾಗಿದ್ದು ನಂತರದಲ್ಲಿ ಜೀರ್ಣೋದ್ಧಾರ ಮಾಡಲಾಗಿದೆ[14] ಆದುದರಿಂದ ಇಲ್ಲಿ ಯಾವುದೇ ಅಲಂಕರಣವಿಲ್ಲ.

**ನವರಂಗ**

ನವರಂಗವು ಒಂಭತ್ತು ಅಂಕಣವಿದೆ. ನವರಂಗದಲ್ಲಿ ಏಳು ದೇವಕೋಷ್ಠಗಳಿದ್ದು ಪ್ರತಿಯೊಂದು ಕೋಷ್ಠದಲ್ಲಿಯೂ ಸಹ ಬಿಡಿ ಶಿಲ್ಪಗಳನ್ನು ಇಡಲಾಗಿದೆ. ಕೋಷ್ಠಗಳನ್ನು ಸಣ್ಣದಾದ ತೆಳು ಕಂಭಗಳ ರಚನೆಯೊಂದಿಗೆ ರಚಿಸಲಾಗಿದೆ. ಮೇಲ್ಭಾಗದಲ್ಲಿ ಸುಂದರವಾದ ವಿಮಾನದ ರಚನೆಯನ್ನು ಮಾಡಿದ್ದಾರೆ ಪ್ರತಿಯೊಂದು ಕೋಷ್ಠಗಳಲ್ಲೂ ಸಹ ವಿಮಾನದ ರಚನೆಯಿದೆ.

ಬಲಭಾಗದಲ್ಲಿ ದೇವಕೋಷ್ಠದಲ್ಲಿ ಗಣಪತಿಯ ಶಿಲ್ಪವಿದೆ. (ಚಿತ್ರ – 12) ಗಣಪತಿಯು ನಾಲ್ಕು ಕೈಗಳನ್ನು ಹೊಂದಿದ್ದು ಬಲಭಾಗದ ಹಿಂಭಾಗದ ಕೈಯಲ್ಲಿ ಪರಶು, ಮುಂಭಾಗದ ಕೈಯಲ್ಲಿ ಅರ್ಧದಂತವನ್ನು ಹಿಡಿದಿದ್ದು ಅಭಯ ಹಸ್ತವನ್ನು ಹೊಂದಿದೆ. ಎಡಭಾಗದ ಹಿಂಬದಿಯ ಕೈಯಲ್ಲಿ ಪಾಶವಿದ್ದು ಮುಂಭಾಗದ ಕೈಯಲ್ಲಿ ಮೋಧಕ ಪಾತ್ರೆಯನ್ನು ಹಿಡಿದಿದ್ದಾನೆ. ಸೊಂಡಿಲನಲ್ಲಿ

ಹೂಗುಚ್ಛವನ್ನು ಹಿಡಿದಿದೆ. ಚಿಕ್ಕ ಕಾಲುಗಳು ಮತ್ತು ಚಿಕ್ಕ ಕೈಗಳನ್ನು ಹೊಂದಿದೆ. ದೊಡ್ಡದಾದ ದುಂಡನೆಯ ಹೊಟ್ಟೆ, ಹೊಟ್ಟೆಯ ಸುತ್ತಲೂ ಉಧರಬಂಧವಾಗಿ ಸರ್ಪವನ್ನು ಚಿತ್ರಿಸಲಾಗಿದೆ. ತಲೆಯಲ್ಲಿ ಕಿರೀಟವನ್ನು ಚಿತ್ರಿಸಲಾಗಿದೆ. ಯಜ್ಞೋಪವೀತ, ಉದರಬಂಧ, ಕೇಯೂರ ಇವುಗಳು ಗಣೇಶನನ್ನು ಅಲಂಕರಿಸಿವೆ. ಇದಕ್ಕೆ ಸುಂದರವಾದ ಪ್ರಭಾವಳಿಯನ್ನು ಕೆತ್ತಲಾಗಿದೆ. ಇದರ ಪಕ್ಕದಲ್ಲಿ

ಸಪ್ತಮಾತೃಕೆಯರಾದ (ಚಿತ್ರ – 11) ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ ಮತ್ತು ಚಾಮುಂಡಿಯ ಶಿಲ್ಪಗಳಿದ್ದು ಪಕ್ಕದಲ್ಲಿ ಗಣಪತಿ ಮತ್ತು ಭೈರವನನ್ನು ಚಿತ್ರಿಸಿರುತ್ತಾರೆ. ಎಡ ಭಾಗದ ಕೋಷ್ಠದಲ್ಲಿ ಮಹಿಷಮರ್ಧಿನಿಯ ಶಿಲ್ಪವಿದೆ. (ಚಿತ್ರ – 13) ಇವಳು ಅಷ್ಠ ಭುಜಗಳನ್ನು ಹೊಂದಿದ್ದು ಕೈಯಲ್ಲಿ ಖಡ್ಗ, ಬಿಲ್ಲು, ಬಾಣ, ಘಂಟಾ, ಗುರಾಣಿ, ಶಂಖ ಮತ್ತು ಚಕ್ರವನ್ನು ಹಿಡಿದಿದ್ದಾಳೆ. ಶಿಲ್ಪದ ಕೆಳಗೆ ಕೋಣನನ್ನು ಚಿತ್ರಿಸಿದ್ದು ಕೋಣನ ಮೇಲಿರುವ ರಾಕ್ಷಸನ ಎದೆಗೆ ಭರ್ಜಿಯಿಂದ ಚುಚ್ಚಿದ್ದಾಳೆ. ಎಡಕಾಲನ್ನು ಮಹಿಷನ ಮೇಲೆ ಇಟ್ಟಿದ್ದಾಳೆ ಇದಕ್ಕೆ ಸುಂದರವಾದ ಪ್ರಭಾವಳಿಯಿದೆ. ಇವಳ ಮುಖಭಾವವು ಸೌಮ್ಯವಾಗಿದ್ದು ದೇಹವನ್ನು ಅಲಂಕರಣ ವಸ್ತುಗಳಿಂದ ಅಲಂಕರಿಸಿದ್ದಾರೆ. ತಲೆಯಲ್ಲಿ ಕಿರೀಟವನ್ನು ಚಿತ್ರಿಸಲಾಗಿದೆ. ಇದರ ಪಕ್ಕದ ಕೋಷ್ಠದಲ್ಲಿ ತ್ರಿಮುಖ ಸುಬ್ರಹ್ಮಣ್ಯನ ಶಿಲ್ಪವಿದೆ. ಸುಬ್ರಹ್ಮಣ್ಯನು ನವಿಲಿನ ಮೇಲೆ ಕುಳಿತಿದ್ದು, ನಾಲ್ಕು ಕೈಗಳನ್ನು ಹೊಂದಿದ್ದಾನೆ. ಕೈಯಲ್ಲಿ ಚಕ್ರ, ಪಾಶ, ಹಾಗೂ ಬಹುಬೀಜ ಫಲವನ್ನು ಹಿಡಿದಿದ್ದಾನೆ. ಬಲಗೈಯನ್ನು ಅಭಯ ಮದ್ರೆಯಲ್ಲಿ ತೋರಿಸಿದ್ದಾನೆ. ನವಿಲಿನ ಬಾಯಲ್ಲಿ ಹಣ್ಣಿನ ಗೊಂಚಲನ್ನು ಚಿತ್ರಿಸಿದ್ದಾನೆ. ಸಾಮಾನ್ಯವಾಗಿ ನವಿಲನ್ನು ಎದುರಾಗಿರುವಂತೆ ಇರುವ ಬಿಡಿಶಿಲ್ಪಗಳು ಹೆಚ್ಚಾಗಿವೆ. ಆದರೆ ಈ ಶಿಲ್ಪದಲ್ಲಿ ನವಿಲಿನ ಮೇಲೆ ಒಂದು ಬದಿಗೆ ತಿರುಗಿಕೊಂಡು ಕುಳಿತಿರುವಂತೆ ಚಿತ್ರಿಸಲಾಗಿದೆ. ಉತ್ತರ ಕೋಷ್ಠದಲ್ಲಿ ಚೆನ್ನಕೇಶವನ ಶಿಲ್ಪವಿದೆ. (ಚಿತ್ರ – 14)  ಸಮಭಂಗಿಯಲ್ಲಿರುವ ಕೇಶವನು ಕೈಯಲ್ಲಿ ಶಂಖ, ಚಕ್ರ, ಗದ, ಪದ್ಮವನ್ನು ಹಿಡಿದಿದ್ದಾನೆ. ಪೀಠದಲ್ಲಿ ಗರುಡನು ವೀರಾಸನದಲ್ಲಿ ಕುಳಿತಿರುವಂತೆ ಚಿತ್ರಿಸಲಾಗಿದೆ. ಇದಕ್ಕೆ ಸುಂದರವಾದ ಪ್ರಭಾವಳಿಯಿದ್ದು ಇಕ್ಕೆಲಗಳಲ್ಲಿ ಶ್ರೀದೇವಿ ಭೂದೇವಿಯರನ್ನು ಚಿತ್ರಿಸಲಾಗಿದೆ. ದಕ್ಷಿಣ ಕೋಷ್ಠದಲ್ಲಿ ಒಂದು ಅಡಿ ಎತ್ತರದ ಲಿಂಗವಿದೆ. ಇದರ ಶಿಖರದ ಪಟ್ಟಿಕೆಯಲ್ಲಿ ಹಿಂದಿ? ಅಕ್ಷರದಲ್ಲಿ ಅರ್ಜುನೇಶ್ವರ ಎಂದು ಕೆತ್ತಲಾಗಿದೆ. ಸ್ಥಳೀಯರು ಸಹ ಅರ್ಜುನೇಶ್ವರ ಎಂದೇ ಪೂಜಿಸುತ್ತಿದ್ದಾರೆ. ಪ್ರತಿಯೊಂದು ಕೋಷ್ಠವನ್ನು ಸಹ ಅಲಂಕಾರಿಕವಾಗಿ ಚಿತ್ರಿಸಲಾಗಿದೆ.

ನವರಂಗದ ಮಧ್ಯಭಾಗದಲ್ಲಿ ಸುಮಾರು ಅರ್ಧ ಅಡಿ ಎತ್ತರದ ಚೌಕಾಕಾರದ ಡಯಾಸ್ ಅನ್ನು ಹೊಂದಿದ್ದು ಅದರ ಮೇಲ್ಭಾಗದಲ್ಲಿ ಮತ್ತೆ ವೃತ್ತಾಕಾರದ ಡಯಾಸ್ ಇದೆ. ಆದುದರಿಂದ ಇದನ್ನು ರಂಗಸ್ಥಳವೆಂದು ಸಹ ಕರೆಯಬಹುದು. ಇಲ್ಲಿ ನಾಲ್ಕು ಸ್ವತಂತ್ರ ಕಂಭಗಳಿವೆ ಇವು

ಸುಮಾರು ಒಂಭತ್ತು ಅಡಿಯಷ್ಟು ಎತ್ತರವಾಗಿವೆ. ಇವುಗಳು ಚೌಕಾಕಾರದ ಪೀಠದ ಮೇಲಿವೆ. ಕೆಳಭಾಗವು ಚೌಕಾಕಾರವಾಗಿದ್ದು ನಂತರದಲ್ಲಿ ದುಂಡಗಿದ್ದು ಮೇಲ್ಭಾಗದಲ್ಲಿ ವೃತ್ತಾಕಾರದ ಮುಚ್ಚಳದ ರೀತಿಯಿದೆ. ಈ ಕಂಭಗಳನ್ನು ಕಡೆತ ಯಂತ್ರದಿಂದ ದುಂಡಗೆ ಕಡೆಯಲ್ಪಟ್ಟಿದೆ. ಕಂಭಗಳ ಮಧ್ಯಭಾಗದಿಂದ ಮೇಲ್ಭಾಗದವರೆಗೂ ಸಹ ಸಣ್ಣ ಸಣ್ಣ ಮಣಿ ಸರಗಳಿಂದ ಕೂಡಿದ ಸೂಕ್ಷ್ಮ ಕೆತ್ತನೆಯನ್ನು ಮಾಡಿದ್ದಾರೆ. (ಚಿತ್ರ – 21) ಭಿತ್ತಿಗೆ ಹೊಂದಿಕೊಂಡಂತೆ ಒಳ ಸುತ್ತಲೂ ಸಹ ಹನ್ನೆರಡು ನಕ್ಷತ್ರಾಕಾರದ ಕಂಭಗಳಿವೆ. ಇವುಗಳು ಭಿತ್ತಿಗೆ ಹೊಂದಿಕೊಂಡಿದ್ದು ಹೊರ ಮುಖ ಮಾತ್ರ ಅಲಂಕರಣದಿಂದ ಕೂಡಿದ್ದು ಭಿತ್ತಿಗೆ ಹೊಂದಿಕೊಂಡಿರುವ ಭಾಗವು ಯಾವುದೇ ಅಲಂಕರಣವಿಲ್ಲದೆ ಸರಳವಾಗಿವೆ. ಹೊರಭಾಗದಿಂದ ನವರಂಗಕ್ಕೆ ಒಳಪ್ರವೇಶದ ದ್ವಾರದ ಒಳ ಬದಿಯಲ್ಲಿ ಕಡೆತ ಯಂತ್ರದಿಂದ ದುಂಡಗೆ ಕಡೆಯಲ್ಪಟ್ಟಿರುವ ಎರಡು ಕಂಭಗಳಿವೆ. ಇವುಗಳು ಅಷ್ಟೇನು ಅಲಂಕರಣವನ್ನು ಹೊಂದಿಲ್ಲದೆ ಸ್ವಲ್ಪ ಭಾಗವು ಗೋಡೆಗೆ ಹೊಂದಿಕೊಂಡಂತೆಯೇ ಇದೆ. ಪೂರ್ವ ಭಾಗದಲ್ಲಿ ಎರಡು ಬದಿಯಲ್ಲೂ ಸಹ ವಿಶಾಲವಾದ ಜಾಲಂದ್ರವನ್ನು ಮಾಡಲಾಗಿದೆ. ಇವು ಚೌಕಾಕಾರವಾಗಿ ಅಷ್ಟಕೋನಕೃತಿಯನ್ನು ಹೊಂದಿವೆ.

ಪ್ರತಿಯೊಂದು ಕಂಭದಲ್ಲಿ ಬೋದಿಗೆಯಿಂದ ತೊಲೆಗೆ ಹೊಂದಿಕೊಂಡಂತೆ ಮದನಿಕ ಶಿಲ್ಪಗಳನ್ನು ಕೆತ್ತಿದ್ದಾರೆ (ಚಿತ್ರ – 7) ಇವುಗಳು ಈ ದೇವಾಲಯದ ನವರಂಗದಲ್ಲಿನ ಒಳ ಭಾಗದ ಸೌಂದರ್ಯವನ್ನು ಹಿಮ್ಮಡಿಗೊಳಿಸಿವೆ. ನವರಂಗದ ನಾಲ್ಕು ಕಂಭಗಳ ಭೋದಿಗೆಯ ಮೇಲೆ ಕಡೆದಿರುವ ಸುಮಾರು 3 ಅಡಿ ಎತ್ತರದ ಹದಿನಾರು ವಿವಿಧ ಭಂಗಿಯ ಮದನಿಕೆಯರ ಶಿಲ್ಪಗಳಿದ್ದವು. ಆದರೆ ಪ್ರಸ್ತುತ ಐದು ಮದನಿಕೆಯರ ಶಿಲ್ಪಗಳು ಕಣ್ಮರೆಯಾಗಿವೆ. ಉಳಿದ ಹನ್ನೊಂದು ಮದನಿಕೆಯರ ಶಿಲ್ಪಗಳಿವೆ. (ಚಿತ್ರ, 15–19) ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದಂತಹ ಕೆಲವೇ ಕೆಲವು ದೇವಾಲಯಗಳಲ್ಲಿ ಈ ರೀತಿಯ ಮದನಿಕ ಶಿಲ್ಪಗಳನ್ನು ಕಾಣಬಹುದು. ಪ್ರತಿಯೊಂದು ಮದನಿಕ ಶಿಲ್ಪಗಳ ಕೆಳಭಾಗದಲ್ಲಿ ಪದ್ಮದ ಅಲಂಕರಣದ ಪೀಠವನ್ನು ಸಹ ಕೆತ್ತಲಾಗಿದೆ.

ವಾಯುವ್ಯ ಭಾಗದಲ್ಲಿನ ಕಂಭದಲ್ಲಿ ಒಟ್ಟು ಮೂರು ಮದನಿಕೆ ಶಿಲ್ಪಗಳಿವೆ. ಪಶ್ಚಿಮ ಭಾಗದಲ್ಲಿ ಮಾತ್ರ ಶಿಲ್ಪವಿಲ್ಲ. ದಕ್ಷಿಣ ದಿಕ್ಕಿನಲ್ಲಿರುವ ಶಿಲ್ಪವು ನಾಟ್ಯಭಂಗಿಯಲ್ಲಿದೆ. (ಚಿತ್ರ – 15) ಸುಂದರವಾದ ಅಲಂಕರಣದಿಂದ ಕೂಡಿದ್ದು ಕೈಯಲ್ಲಿ ಕಡಗ, ಕಾಲಿಗೆ ಕಡಗ ಗೆಜ್ಜೆ ಕೊರಳಲ್ಲಿ ಹೊಟ್ಟೆಯತನಕ ಇಳಿಬಿಟ್ಟ ಹಾರ ಇದಲ್ಲದೆ ಸಣ್ಣ ಸಣ್ಣ ಕಂಠಿಹಾರಗಳನ್ನು ಧರಿಸಿದ್ದಾಳೆ. ಇವಳು ಧರಿಸಿರುವ ವಸ್ತ್ರವು ಅತಿ ಹೆಚ್ಚು ಸೂಕ್ಷ್ಮ ಕುಸುರಿಯನ್ನು ಹೊಂದಿದ್ದು ವಸ್ತ್ರದ ಪೂರ್ತಿ ಭಾಗವು ಸೂಕ್ಷ್ಮ ಕುಸುರಿ ಕೆತ್ತನೆಯನ್ನು ಹೊಂದಿದೆ. ತಲೆಯು ಗುಂಗುರು ಕೂದಲಿನ ಅಲಂಕರಣೆಯನ್ನು

ಹೊಂದಿದ್ದು ತಲೆಯ ಹಿಂಬದಿಯಲ್ಲಿ ವೃತ್ತಾಕಾರದ ಅಲಂಕರಣೆಯನ್ನು ಮಾಡಲಾಗಿದೆ. ಇದಕ್ಕೆ ಸುಂದರವಾದ ಪ್ರಭಾವಳಿಯಿದ್ದು. ಪ್ರಭಾವಳಿಯನ್ನು ಲತಾ ಸುರುಳಿಬಳ್ಳಿಯಿಂದ ಅಲಂಕರಿಸಲಾಗಿದ್ದು ಸಣ್ಣ ಹಣ್ಣಿನ ಗೊಂಚಲನ್ನು ಸಹ ಕೆತ್ತಲಾಗಿದೆ. ಬಲಕಾಲನ್ನು ಕೆಳಗೆ ಇಟ್ಟು ಎಡದ ಕಾಲನ್ನು ಬಲಕ್ಕೆ ತಿರುಗಿಸಿದೆ ಬಲದ ಕೈಯನ್ನು ಇಳಿಬಿಟ್ಟು ಎಡದ ಕೈಯನ್ನು ಮೇಲಕ್ಕೆ ಎತ್ತಲಾಗಿದೆ. ಇವಳನ್ನು ನೃತ್ಯಭಂಗಿಯಲ್ಲಿ ತೋರಿಸಿದ್ದಾನೆ. ಇಕ್ಕೆಲಗಳಲ್ಲಿ ಇಬ್ಬರು ಮೃದಂಗವನ್ನು ಬಾರಿಸುತ್ತಿದ್ದಾರೆ. ಅವರ ತಾಳಕ್ಕೆ ಇವಳು ಕುಣಿಯುವಂತೆ ಶಿಲ್ಪಿಯು ಈ ನೃತ್ಯಗಾತಿಯನ್ನು ಚಿತ್ರಿಸಿದ್ದಾನೆ. (ಚಿತ್ರ – 16) ಪೂರ್ವ ಭಾಗದಲ್ಲಿರುವ ಮದನಿಕೆಯ ಶಿಲ್ಪವು ಸಹ ಮೇಲಿನ ಶಿಲ್ಪದಂತೆ ಅಲಂಕರಣೆಯನ್ನು ಹೊಂದಿದೆ. ಎಡಗಾಲನ್ನು ಕೆಳಗೆ ಇಟ್ಟುಕೊಂಡು ಬಲಗಾಲನ್ನು ಎಡಕ್ಕೆ ತಿರುಗಿಸಿದ್ದಾಳೆ. ಯುವತಿಯು ಬಲಗೈಯನ್ನು ಮೇಲಕ್ಕೆ ಎತ್ತಿದ್ದು. ಎಡಗೈಯನ್ನು ಕಟಿ ಪ್ರದೇಶದಲ್ಲಿ ಅಂಗೈಯನ್ನು ಕೆಳಗೆ ಬಿಟ್ಟಿದ್ದಾಳೆ. ಇವಳು ಅತಿಭಂಗಿಯಲ್ಲಿ ನಿಂತಿದ್ದಾಳೆ. ಇವಳಿಗೂ ಸಹ ಮಕರತೋರಣದ ಅಲಂಕರಣವಿದ್ದು ಇಕ್ಕೆಲಗಳಲ್ಲಿ ಇಬ್ಬರು ಮೃದಂಗವನ್ನು ಭಾರಿಸುತ್ತಿರುವ ಸಣ್ಣ ಶಿಲ್ಪಗಳನ್ನು ಕೆತ್ತಲಾಗಿದೆ. ಬಲಭಾಗದಲ್ಲಿರುವ ವ್ಯಕ್ತಿಯು ಒಂದು ಕಾಲನ್ನು ಮಡಿಚಿಕೊಂಡು ವೀರಾಸನದಲ್ಲಿ ಕುಳಿತಂತೆ ಇದ್ದು ಮತ್ತೊಂದು ಬದಿಯಲ್ಲಿರುವವನು ಮೃದಂಗವನ್ನು ಅವನ ಅರ್ಧಭಾಗದಷ್ಟು ಮೇಲಕ್ಕೆತ್ತಿಕೊಂಡು ಬಾರಿಸುತ್ತಿರುವಂತೆ ಚಿತ್ರಿಸಲಾಗಿದೆ. ಉತ್ತರ ಭಾಗದಲ್ಲಿರುವ ಮದನಿಕೆಯ ಶಿಲ್ಪವು ದ್ವಿಭಂಗಿಯಲ್ಲಿದೆ. ಇದು ಸಹ ಬಹಳ ಅಲಂಕಾರಿಕವಾಗಿದ್ದು ಕೈಯನ್ನು ಅಭಯ ಹಾಗೂ ವರದ ಹಸ್ತವನ್ನು ಹೊಂದಿರುವ ನಾಟ್ಯಭಂಗಿಯಲ್ಲಿರುತ್ತದೆ. ಮೇಲೆ ತಿಳಿಸಿದ ಎರಡು ಶಿಲ್ಪಗಳಷ್ಟೆ ಅಲಂಕರಣವನ್ನು ಇದು ಸಹ ಹೊಂದಿದ್ದು ತೋರಣವು ಮಾತ್ರ ಉಳಿದೆರಡು ಶಿಲ್ಪಗಳಿಗಿಂತ ಹೆಚ್ಚಿನ ಅಲಂಕರಣವನ್ನು ಹೊಂದಿದೆ. ವಸ್ತ್ರವನ್ನು ಕೆಳಕ್ಕೆ ಇಳಿಬಿಟ್ಟಂತೆ ಚಿತ್ರಿಸಲಾಗಿದೆ. ಇಕ್ಕೆಲಗಳಲ್ಲಿ ಡಮರನ್ನು ಬಾರಿಸುತ್ತಿರುವ ವ್ಯಕ್ತಿಗಳನ್ನು ಕೆತ್ತಲಾಗಿದೆ.

ಈಶಾನ್ಯ ಭಾಗದಲ್ಲಿರುವ ಕಂಭದಲ್ಲಿ ಮೂರು ಮದನಿಕೆ ಶಿಲ್ಪಗಳಿವೆ. ಪಶ್ಚಿಮ ಭಾಗದಲ್ಲಿ ಮಾತ್ರ ಶಿಲ್ಪವಿಲ್ಲ. ಉತ್ತರ ದಿಕ್ಕಿನಲ್ಲಿರುವ ಮದನಿಕೆಯ ಶಿಲ್ಪವು ದ್ವಿಭಂಗಿಯಲ್ಲಿದೆ. (ಚಿತ್ರ – 17) ಇವಳು ಸಹ ಕೈ. ಕಾಲುಗಳಿಗೆ ಕಡಗಗಳನ್ನು ಧರಿಸಿದ್ದಾರೆ. ಸುಂದರವಾದ ಕೇಶವಿನ್ಯಾಸ ತಲೆಯ ಹಿಂಭಾಗದಲ್ಲಿ ವೃತ್ತಾಕಾರದ ಅಲಂಕರಣೆ ಹಾಗೂ ಸುಂದರವಾದ ಪ್ರಭಾವಳಿಯನ್ನು ಹೊಂದಿದೆ. ಕೈಯಲ್ಲಿ ತಾಳಗಳನ್ನು ಹಿಡಿದಿದೆ. ಮುಖದ ಭಾವವು ಬಹಳ ಸೌಮ್ಯತೆಯಿಂದ ಕೂಡಿದೆ. ಕೆಳಭಾಗದ ಎರಡು ಬದಿಯಲ್ಲಿ ಕೊಳಲನ್ನು ಬಾರಿಸುತ್ತಿರುವ ಯುವಕರ ಸಣ್ಣ ಶಿಲ್ಪಗಳನ್ನು ಕೆತ್ತಲಾಗಿದೆ. ಪೂರ್ವಭಾಗದ ಮದನಿಕೆ ಶಿಲ್ಪವು ತ್ರಿಭಂಗಿಯಲ್ಲಿದೆ. (ಚಿತ್ರ – 18) ಇದು ಸಹ ಹೆಚ್ಚಿನ

ಅಲಂಕರಣವನ್ನು ಹೊಂದಿದೆ. ಕಾಲಿಗೆ ದಪ್ಪನೆಯ ಕಡಗಗಳನ್ನು ಧರಿಸಿದ್ದು ನಡುವಿನಿಂದ ಕೆಳಕ್ಕೆ ಇಳಬಿಟ್ಟ ದೋತಿಯನ್ನು ಕುಸುರಿ ಕೆತ್ತನೆಯಿಂದ ಅಲಂಕರಿಸಲಾಗಿದೆ. ಮಧ್ಯದಲ್ಲಿ ಇಳಬಿಟ್ಟ ಅಲಂಕಾರಿಕ ದಪ್ಪನೆಯ ಹೂಗುಚ್ಚವನ್ನು ಚಿತ್ರಿಸಲಾಗಿದೆ. ಎಡ ಭಾಗದ ಕೈಯಲ್ಲಿ ದರ್ಪಣವನ್ನು ಹಿಡಿದಿದ್ದು ಅವಳ ಸೌಂದರ್ಯವನ್ನು ಸವಿಯುತ್ತಾ ಅಲಂಕರಣೆಯನ್ನು ಮಾಡಿಕೊಳ್ಳುತ್ತಿದ್ದಾಳೆ. ಬಲಗೈಯ ತರ್ಜನಿ ಹಸ್ತವು ಸ್ವಲ್ಪ ಬಗ್ಗಿ ಹಣೆಗೆ ತಿಳಕವನ್ನಿಟ್ಟುಕೊಳ್ಳಲು ಪ್ರಯತ್ನಿಸುವಂತಿದೆ. ವಿಶ್ವಸೌಂದರ್ಯ ದರ್ಪಣ ದೃಶ್ಯಮಾನವಾದಂತಿದೆ. ಇವಳು ಒಂದು ರೀತಿಯಲ್ಲಿ ಕಾಮಾಕರ್ಷಿಣೀ ಶಕ್ತಿಯಾಗಿಯೂ ಕಾಣುತ್ತಾಳೆ. ಇಲ್ಲಿಯು ಸಹ ಮಕರತೋರಣದ ಅಲಂಕರಣೆಯಿದ್ದು ಇಕ್ಕೆಲಗಳಲ್ಲಿ ಒಬ್ಬ ಯುವತಿಯು ಹೂಗುಚ್ಚವನ್ನು ಮತ್ತೊಬ್ಬಳು ಒಂದು ರೀತಿಯ ಕಡ್ಡಿಯನ್ನು ಹಿಡಿದಿರುವಂತೆ ಚಿತ್ರಿಸಲಾಗಿದೆ. ಸಾಮಾನ್ಯವಾಗಿ ಹೊಯ್ಸಳರ ಕಾಲದ ಶಿಲ್ಪಗಳಲ್ಲಿ ದರ್ಪಣ ಸುಂದರಿಯರನ್ನು ಕೆತ್ತಲಾಗುತ್ತಿತ್ತು ಅದೇ ರೀತಿಯ ಶಿಲ್ಪವನ್ನು ಶಿಲ್ಪಿಯು ಇಲ್ಲಿ ಕಂಡರಿಸಿದ್ದಾನೆ. ದಕ್ಷಿಣ ದಿಕ್ಕಿನಲ್ಲಿ ಅತಿಭಂಗಿಯಲ್ಲಿರುವ ನೃತ್ಯಗಾರ್ತಿಯನ್ನು ಚಿತ್ರಿಸಲಾಗಿದೆ. ಇವಳೂ ಸಹ ಹೆಚ್ಚಿನ ಅಲಂಕರಣೆಯನ್ನು ಹೊಂದಿದ್ದಾಳೆ. ಆದರೆ ಉಳಿದ ಶಿಲ್ಪಗಳಲ್ಲಿ ಇರುವ ದೊಡ್ಡದಾದ ಕಂಠಿಹಾರವನ್ನು ಮಾತ್ರ ಇಲ್ಲಿ ಕೆತ್ತಲಾಗಿಲ್ಲ. ಉಳಿದಂತೆ ಎಲ್ಲ ಅಲಂಕರಣವನ್ನು ಮಾಡಲಾಗಿದೆ. ಇಕ್ಕೆಲಗಳಲ್ಲಿ ಡಮರನ್ನು ಭಾರಿಸುತ್ತಿರುವ ಸಣ್ಣ ಶಿಲ್ಪಗಳಿವೆ. ಇವಳ ಎಡ ಭಾಗದ ಮೊಣಕೈ ಮಾತ್ರ ಭಗ್ನವಾಗಿದೆ.

ಆಗ್ನೇಯ ಭಾಗದಲ್ಲಿರುವ ಕಂಭದಲ್ಲಿ ನಾಲ್ಕು ದಿಕ್ಕಿನಲ್ಲಿಯೂ ಸಹ ಮದನಿಕ ಶಿಲ್ಪಗಳಿವೆ. ಉತ್ತರ ಭಾಗದಲ್ಲಿನ ಮದನಿಕೆಯು ಸಹ ಹೆಚ್ಚಿನ ಅಲಂಕರಣವನ್ನು ಹೊಂದಿದ್ದಾಳೆ. ಬಲಭಾಗದ ಭುಜಕ್ಕೆ ಡಮರನ್ನು ನೇತುಹಾಕಿಕೊಂಡಿದ್ದು ಎಡ ಕೈಯನ್ನು ಡಮರಿನ ಮೇಲ್ಕಟ್ಟಿನ ಒಳಕ್ಕೆ ತೂರಿಸಿದ್ದು ಬಲಕೈಯಿಂದ ಸಣ್ಣದಾದ ಒಂದು ಕಡ್ಡಿಯಿಂದ ಡಮರನ್ನು ಬಾರಿಸುತ್ತಿರುವಂತೆ ಚಿತ್ರಿಸಲಾಗಿದೆ. (ಚಿತ್ರ – 19) ತೋರಣದ ಇಕ್ಕೆಲಗಳಲ್ಲಿಯೂ ಸಹ ಇಬ್ಬರು ಡಮರನ್ನು ಭಾರಿಸುತ್ತಿರುವ ವ್ಯಕ್ತಿಗಳ ಸಣ್ಣ ಶಿಲ್ಪಗಳಿವೆ. ಪೂರ್ವ ಭಾಗದ ಮದನಿಕೆಯು ಅತಿಭಂಗಿಯಲ್ಲಿದೆ. ಇದು ಸಹ ಹೆಚ್ಚಿನ ಅಲಂಕರಣವನ್ನು ಹೊಂದಿದೆ. ಬಲಕಾಲನ್ನು ಕೆಳಕ್ಕೆ ಇಟ್ಟುಕೊಂಡು ಎಡಕಾಲನ್ನು ಬಲಕ್ಕೆ ತಿರುಗಿಸಿ ಪಾದವು ಮೇಲಕ್ಕೆ ಕಾಣುವಂತೆ ಚಿತ್ರಿಸಲಾಗಿದೆ. ತೋರಣದ ಇಕ್ಕೆಲದಲ್ಲಿ ಡಮರನ್ನು ಬಾರಿಸುತ್ತಿರುವ ವ್ಯಕ್ತಿಗಳ ಸಣ್ಣ ಶಿಲ್ಪಗಳಿವೆ. ಇವಳು ಆ ತಾಳಕ್ಕೆ ಕುಣಿಯುತ್ತಿರುವಂತೆ ಚಿತ್ರಿಸಿದ್ದು ಅವಳ ಬಟ್ಟೆಯು ಗಾಳಿಗೆ ತೂರುವ ಹಾಗೆ ಚಿತ್ರಿಸಲಾಗಿದೆ. ಆದುದರಿಂದ ಇವಳು ನೃತ್ಯದಲ್ಲಿ ಎಷ್ಟು ಮೈಮರೆತು ಕುಣಿಯುತ್ತಿದ್ದಾಳೆ ಎಂದು ತಿಳಿಯಬಹುದು. ದಕ್ಷಿಣ ಭಾಗದಲ್ಲಿರುವ ಮದನಿಕೆಯು ದ್ವಿಭಂಗಿಯಲ್ಲಿದ್ದು ಇವಳನ್ನೂ ಸಹ ಅಲಂಕರಣದಿಂದ ಕೂಡಿದ್ದಂತೆ ಚಿತ್ರಿಸಲಾಗಿದೆ. ತೋರಣದ

ಇಕ್ಕೆಲಗಳಲ್ಲಿ ಡಮರನ್ನು ಬಾರಿಸುತ್ತಿರುವ ವ್ಯಕ್ತಿಗಳ ಚಿತ್ರಗಳಿವೆ. ತೋರಣದಲ್ಲಿ ಲತಾಸುರುಳಿ ಬಳ್ಳಿಗಳಿಂದ ಅಲಂಕರಿಸಲಾಗಿದೆ. ಕೆಳಭಾಗದಲ್ಲಿ ಪದ್ಮಪೀಠದ ಅಲಂಕರಣೆಯಿಲ್ಲದೆ ವೃತ್ತಾಕಾರದ ಕಲ್ಲನ್ನು ಹಾಕಲಾಗಿದೆ. ಉಳಿದ ಶಿಲ್ಪಗಳಿಗಿಂತ ಇದರ ದೇಹವು ಸ್ವಲ್ಪ ಸಣ್ಣದಾಗಿದೆ. ಪಶ್ಚಿಮ ಭಾಗದಲ್ಲಿರುವ ಮದನಿಕೆಯ ಶಿಲ್ಪವು ತ್ರಿಭಂಗಿಯಲ್ಲಿದ್ದು ಸುಂದರವಾದ ಅಲಂಕರಣವನ್ನು ಹೊಂದಿದೆ. ಇವಳಿಗೆ ಹೆಚ್ಚಾಗಿ ಇಳಿಬಿಟ್ಟ ದೋತಿಯನ್ನು ಹಾಕಲಾಗಿದೆ. ಕೊರಳಿನಿಂದ ಮಂಡಿಯವರೆಗೆ ಇಳಿಬಿಟ್ಟಿರುವ ಹಾರ ಒಂದು ಕಂಠಿಹಾರ, ಎರಡು ಸ್ತನಹಾರಗಳನ್ನು ಚಿತ್ರಿಸಲಾಗಿದೆ. ಕಿವಿಯಲ್ಲಿ ದೊಡ್ಡದಾದ ಕರ್ಣಕುಂಡಲವನ್ನು ಚಿತ್ರಿಸಲಾಗಿದೆ. ಬಲಗೈಯನ್ನು ವಿಸ್ಮಯದ ರೀತಿಯಲ್ಲಿ ಚಿತ್ರಿಸಲಾಗಿದೆ. ಎಡಗೈಯನ್ನು ಮೇಲಕ್ಕೆ ಎತ್ತಿರುವಂತೆ ಚಿತ್ರಿಸಿದ್ದು ಮುಂಗೈ ಮುರಿದಿದೆ. ಬಹುಶಃ ಈ ಕೈಯಲ್ಲಿ ದರ್ಪಣವನ್ನು ಹಿಡಿದಿದ್ದಿರಬೇಕು. ಏಕೆಂದರೆ ಇವಳ ಎರಡು ಬದಿಯಲ್ಲಿ ಇರುವ ಸಣ್ಣ ಸ್ತ್ರೀ ಶಿಲ್ಪಗಳಲ್ಲಿ ಒಬ್ಬಳು ಕೈಯಲ್ಲಿ ದೋತಿಯನ್ನು ಮತ್ತೊಬ್ಬಳು ಒಂದು ಕೈಯಲ್ಲಿ ಸಣ್ಣದಾದ ಪೆಟ್ಟಿಗೆಯನ್ನು ಮತ್ತೊಂದು ಕೈಯಲ್ಲಿ ಹೂವನ್ನು ಹಿಡಿದುಕೊಂಡು ಮದನಿಕೆಗೆ ಕೊಡುತ್ತಿರುವಂತೆ ಚಿತ್ರಿಸಲಾಗಿದೆ. ಆದುದರಿಂದ ಈ ಶಿಲ್ಪ ಲಕ್ಷಣವನ್ನು ಗಮನಿಸಿದಾಗ ಇದು ಸೌಂದರ್ಯವನ್ನು ಮಾಡಿಕೊಳ್ಳುತ್ತಿರುವ ಮದನಿಕ ಶಿಲ್ಪದ ಲಕ್ಷಣವನ್ನು ಹೊಂದಿದೆ. ಇಲ್ಲಿಯು ಸಹ ಸುಂದರವಾದ ತೋರಣವನ್ನು ಚಿತ್ರಿಸಲಾಗಿದೆ.

ನೈರುತ್ಯ ಭಾಗದಲ್ಲಿರುವ ಕಂಭದಲ್ಲಿ ಉತ್ತರ ದಿಕ್ಕಿಗೆ ಮಾತ್ರ ಮದನಿಕ ಶಿಲ್ಪವಿದೆ. ಉಳಿದ ಭಾಗದವು ಭಗ್ನವಾಗಿವೆ. ದ್ವಿಭಂಗಿಯಲ್ಲಿರುವ ನಿಂತಿರುವ ಈ ಶಿಲ್ಪವು ಬೇರೆ ಶಿಲ್ಪಗಳಷ್ಟೇ ಅಲಂಕರಣವನ್ನು ಹೊಂದಿದೆ. ಮುಖದ ಭಾವವು ವಿಸ್ಮಯವನ್ನುಂಟು ಮಾಡುವಂತಿದೆ. ಈಕೆಯ ಕೈಯಲ್ಲಿ ತಾಳಗಳನ್ನು ಹಿಡಿದಿದ್ದಾಳೆ ಇಕ್ಕೆಲಗಳಲ್ಲಿ ಡಮರನ್ನು ಬಾರಿಸುತ್ತಿರುವ ಮತ್ತು ಕೊಳಲನ್ನು ನುಡಿಸುತ್ತಿರುವ ವ್ಯಕ್ತಿಗಳ ಸಣ್ಣ ಶಿಲ್ಪಗಳಿವೆ. ತೋರಣದಲ್ಲಿ ಇಳಿಬಿಟ್ಟ ಹಣ್ಣಿನ ಗೊಂಚಲನ್ನು ಸಹ ಚಿತ್ರಿಸಿದ್ದು ಇಡೀ ತೋರಣದ ಸೌಂದರ್ಯಕ್ಕೆ ಇದು ಪುಷ್ಟಿ ನೀಡುತ್ತದೆ.

ಮೇಲೆ ವಿವರಿಸಿದ ಮದನಿಕೆಯರ ಶಿಲ್ಪಗಳು ದೇವಾಲಯದ ಒಳಭಾಗದ ಅಲಂಕರಣವನ್ನು ಇಮ್ಮಡಿಗೊಳಿಸಿವೆ. ಇವುಗಳಲ್ಲಿ ಎರಡು ದರ್ಪಣಸುಂದರಿಯರ ಶಿಲ್ಪಗಳು, ತಾಳವನ್ನು ಬಾರಿಸುತ್ತಿರುವ ಎರಡು ಶಿಲ್ಪಗಳು. ಡಮರನ್ನು ಬಾರಿಸುತ್ತಿರುವ ಒಂದು ಶಿಲ್ಪ, ಉಳಿದ ಆರು ಶಿಲ್ಪಗಳು ನೃತ್ಯಭಂಗಿಯಲ್ಲಿವೆ. ಹೊಯ್ಸಳರ ಕಾಲದ ಶಿಲ್ಪಗಳು ಸ್ತ್ರೀಯ ಶಿಲ್ಪಗಳನ್ನು ಕೆತ್ತುವಾಗ ತುಸು ಹೆಚ್ಚಿನ ಆಸಕ್ತಿಯನ್ನು ತೋರಿಸಿದಂತೆ ಕಾಣುತ್ತದೆ. ಏಕೆಂದರೆ ಸ್ತ್ರೀಯ ದೇಹ ಸೌಂದರ್ಯಕ್ಕೆ ಹೆಚ್ಚು ಹೊತ್ತು ನೀಡುವ ಸೂಕ್ಷ್ಮ ಕುಸುರಿಯ ಚಿತ್ರಗಳಿರುವ ವಸ್ತ್ರಗಳು, ಆಭರಣಗಳು, ಕೇಶವಿನ್ಯಾಸ,

ಉಬ್ಬಿದ ಸ್ತನಗಳು, ಸಣ್ಣದಾದ ಸೊಂಠದ ಭಾಗ, ಮುಖದ ಭಾವನೆ, ಅರ್ಧ ಮುಚ್ಚಿದ ಕಣ್ಣುಗಳು ಈ ರೀತಿಯಲ್ಲಿ ಅವುಗಳ ಭಾವಕ್ಕೆ ಹೆಚ್ಚು ಹೊತ್ತು ನೀಡಿ ಶಿಲ್ಪಿಯು ಈ ಶಿಲ್ಪಗಳ ಕೆತ್ತನೆಯನ್ನು ಮಾಡಿದ್ದಾನೆ.

ನವರಂಗವು ಒಂಭತ್ತು ಅಂಕಣವಿದ್ದು ಪ್ರತಿಯೊಂದು ಅಂಕಣದಲ್ಲೂ ಸಹ ಭುವನೇಶ್ವರಿಗಳನ್ನು ಕೆತ್ತಲಾಗಿದೆ. ಇಲ್ಲಿಯ ಮಧ್ಯದ ಭುವನೇಶ್ವರಿ ಮಾತ್ರ ತುಸು ವಿಶಾಲವಾಗಿದ್ದು ಹೆಚ್ಚಿನ ಅಲಂಕರಣೆಯನ್ನು ಹೊಂದಿದೆ. ಇದು ಚೌಕಾಕಾರದ ಅಲಂಕರಣವನ್ನು ಹೊಂದಿದೆ. (ಚಿತ್ರ – 25) ಮಧ್ಯದಲ್ಲಿ ನೃತ್ಯತಾಂಡವ ಶಿವನಿದ್ದಾನೆ. ಒಂದು ಬದಿಯಲ್ಲಿ ಗಣೇಶ ಮತ್ತೊಂದು ಬದಿಯಲ್ಲಿ ಕಾರ್ತಿಕೇಯ ಪಕ್ಕದಲ್ಲಿ ಸಣ್ಣದಾದ ನಂದಿಯನ್ನು ಚಿತ್ರಿಸಲಾಗಿದೆ. ಅಕ್ಕ ಪಕ್ಕದ ಪಟ್ಟಿಕೆಯಲ್ಲಿ ವಿಷ್ಣು ಮತ್ತು ಬ್ರಹ್ಮನ ಶಿಲ್ಪವನ್ನು ಕೆತ್ತಲಾಗಿದೆ. ಉಳಿದ ಪಟ್ಟಿಕೆಯಲ್ಲಿ ಸಂಗೀತಗಾರರು ಮತ್ತಿತರರನ್ನು ಚಿತ್ರಿಸಲಾಗಿದೆ. ನಂತರದ ಕೆಳ ಪಟ್ಟಿಕೆಯಲ್ಲಿ ವಿಷ್ಣುವಿನ ಅವತಾರ ಮೂರ್ತಿಗಳನ್ನು ಕೆತ್ತಲಾಗಿದೆ. ಮೂರ್ತಿಗಳ ಅಕ್ಕ ಪಕ್ಕದಲ್ಲಿ ಸಂಗೀತಗಾರರು, ನೃತ್ಯಗಾರರನ್ನು ಚಿತ್ರಿಸಲಾಗಿದೆ. ಅದರ ಕೆಳ ಪಟ್ಟಿಕೆಯಲ್ಲಿ ಶಿವನ ವಿವಿಧ ರೂಪಗಳನ್ನು ಕೆತ್ತಲಾಗಿದೆ. ಈ ಮೂರ್ತಿಗಳ ಅಕ್ಕ ಪಕ್ಕದಲ್ಲಿ ಭೂತ, ಗಣ, ಪಿಶಾಚಗಳನ್ನು ನೃತ್ಯಭಂಗಿಯಲ್ಲಿ ಕೆತ್ತಲಾಗಿದೆ. ಅಲ್ಲಲ್ಲಿ ಪದ್ಮದ ಅಲಂಕರಣೆ ಹಾಗೂ ಪದ್ಮದ ದಳಗಳ ಅಲಂಕರಣೆಯನ್ನು ಮಾಡಲಾಗಿದೆ.

ಉಳಿದ ಎಂಟು ಭುವನೇಶ್ವರಿಗಳಲ್ಲಿಯೂ ಸಹ ತುಸು ವ್ಯತ್ಯಾಸಗಳೊಂದಿಗೆ ಪದ್ಮದ ಅಲಂಕರಣೆಯೊಂದಿಗೆ ರಚಿಸಲಾಗಿದೆ. ಆಯಾ ದಿಕ್ಕಿಗೆ ಅನುಗುಣವಾಗಿ ಇರುವಂತೆ ಅಷ್ಟದಿಕ್ಪಾಲಕರನ್ನು ಅವರ ವಾಹನದ ಮೇಲೆ ಕುಳಿತಂತೆ ಚಿತ್ರಿಸಲಾಗಿದೆ. ಅವುಗಳ ಸುತ್ತಲೂ ಪದ್ಮದ ಅಲಂಕರಣೆಯನ್ನು ಮಾಡಲಾಗಿದೆ. ಇವುಗಳನ್ನು ವೃತ್ತಾಕಾರವಾಗಿ, ಚೌಕಾಕಾರವಾಗಿ, ಘನಾಕೃತಿಯಲ್ಲಿ, ನಕ್ಷತ್ರಾಕಾರದಲ್ಲಿ, ಕೆತ್ತಲಾಗಿದೆ. ಎಲ್ಲವೂ ಸಹ ಪದ್ಮದ ಅಲಂಕರಣೆಯನ್ನು ಹೊಂದಿದ್ದು ಮಧ್ಯದಲ್ಲಿ ಮಾತ್ರ ಅಷ್ಟ ದಿಕ್ಪಾಲಕರನ್ನು ಕೆತ್ತಲಾಗಿದೆ.

ನವರಂಗದ ದ್ವಾರದಲ್ಲಿ ಸುಮಾರು ಐದು ಅಡಿ ಎತ್ತರದ ಶೈವ ದ್ವಾರಪಾಲಕರನ್ನು ಕೆತ್ತಲಾಗಿದೆ. ಇವನ್ನು ಬಹಳ ಸುಂದರವಾಗಿ ಅಲಂಕರಿಸಲಾಗಿದೆ. ಬಲಭಾಗದಲ್ಲಿರುವ ದ್ವಾರ ಪಾಲಕನ ಹಿಂಬದಿಯ ಕೈಯಲ್ಲಿ ತ್ರಿಶೂಲ, ಡಮರು ಇದ್ದು ಮುಂಭಾಗದ ಎಡಕೈಯಲ್ಲಿ ಗದೆಯನ್ನು ಹಿಡಿದಿದ್ದು ಬಲಗೈ ಅಭಯ ಹಸ್ತವನ್ನು ಹೊಂದಿದೆ. ಸುಂದರವಾದ ಕಿರೀಟವನ್ನು ಸಹ ಹೊಂದಿದೆ. (ಚಿತ್ರ – 23) ಎಡಭಾಗದಲ್ಲಿರುವ ದ್ವಾರಪಾಲಕನ ಹಿಂಬದಿಯ ಕೈಯಲ್ಲಿ ಡಮರು ಹಾಗೂ ಮೂರು ಹೆಡೆಯ ಸರ್ಪವನ್ನು ಕೆತ್ತಲಾಗಿದೆ. ಮುಂಬದಿಯ ಬಲ ಕೈಯಲ್ಲಿ ಗದೆಯನ್ನು ಹಿಡಿದಿದ್ದು

ಎಡಕೈಯು ಅಭಯ ಹಸ್ತವನ್ನು ಹೊಂದಿದೆ. (ಚಿತ್ರ – 24) ಎರಡು ದ್ವಾರ ಪಾಲಕರ ಪಕ್ಕದಲ್ಲಿಯೂ ಸಹ ಎರಡು ಕಂಭಗಳಿವೆ. ಲಲಾಟ ಬಿಂಬದಲ್ಲಿ ಕುಳಿತಿರುವ ಶಿವನನ್ನು ಕೆತ್ತಲಾಗಿದೆ. ಇದು ಸಹ ಬಹಳ ಅಲಂಕಾರಿಕವಾಗಿದೆ. ಶಿವನು ಬಲಕಾಲನ್ನು ಕೆಳಗೆ ಇಳಿಬಿಟ್ಟು ಎಡಕಾಲನ್ನು ಮಡಿಚಿಕೊಂಡಿರುವಂತೆ ಕೆತ್ತಲಾಗಿದೆ. ಕಾಲಿನ ಕೆಳಗೆ ಅಪಸ್ಮಾರಪುರುಷನನ್ನು ಕೆತ್ತಲಾಗಿದೆ. ಶಿವನ ಎರಡು ಬದಿಯಲ್ಲೂ ವ್ಯಾಳದ ಅಲಂಕರಣೆಯಿದೆ.

ದೇವಾಲಯದ ವಾಯುವ್ಯ ಭಾಗದಲ್ಲಿ ಅಮ್ಮನವರ (ಪಾರ್ವತಿ) ಗುಡಿಯಿದೆ. ಇದನ್ನು ಬಹುಶಃ ತದನಂತರದ ಕಾಲದಲ್ಲಿ ಕಟ್ಟಲಾಗಿದೆ. ದೇವಾಲಯವು ವಾಸ್ತು ಶೈಲಿಯ ದೃಷ್ಟಿಯಿಂದ ಅಷ್ಟೇನು ಮುಖ್ಯವಾದುದಲ್ಲ. ಇದು ಸಹ ಗರ್ಭಗೃಹ, ಸುಖನಾಸಿ ಹಾಗೂ ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ ಸುಮಾರು ನಾಲ್ಕು ಅಡಿ ಎತ್ತರದ ಪಾರ್ವತಿ ಶಿಲ್ಪವಿದೆ. (ಚಿತ್ರ – 20) ಇದು ಸಮಭಂಗಿಯಲ್ಲಿದ್ದು ಕಂಠಿಹಾರ, ಆಭರಣಗಳಿಂದ ಅಲಂಕೃತವಾಗಿದೆ. ಇದಕ್ಕೆ ಸುಂದರವಾದ ಪ್ರಭಾವಳಿಯಿದೆ. ಗರ್ಭಗೃಹದಷ್ಟೇ ಅಳತೆಯ ಸುಖನಾಸಿಯಿದೆ. ನಂತರದ ನವರಂಗವು ಒಂಭತ್ತು ಅಂಕಣವಿದ್ದು ಇಲ್ಲಿ ಕಡೆತದಿಂದ ದುಂಡಗೆ ಕಡೆಯಲ್ಪಟ್ಟ ನಾಲ್ಕು ಸ್ವತಂತ್ರ ಕಂಭಗಳಿವೆ. ಆದರೆ ಬ್ರಹ್ಮೇಶ್ವರ ದೇವಾಲಯದಲ್ಲಿರುವ ಕಂಭದ ರೀತಿಯಲ್ಲಿ ಅಲಂಕೃತವಾಗಿಲ್ಲ. ಭಿತ್ತಿಗೆ ಹೊಂದಿಕೊಂಡಂತೆ ನಕ್ಷತ್ರಾಕಾರದ ಹನ್ನೆರಡು ಕಂಭಗಳಿವೆ. ಇಲ್ಲಿರುವ ಕಂಭಗಳೆಲ್ಲವೂ ಸಹ ಹೊಯ್ಸಳರ ಕಾಲದ ಲಕ್ಷಣಗಳನ್ನು ಹೊಂದಿವೆ. ಇದನ್ನು ಬಿಟ್ಟರೆ ಉಳಿದಂತೆ ಅದಿಷ್ಠಾನ, ಭಿತ್ತಿ ಹಾಗೂ ಮೇಲ್ಛಾವಣಿಯನ್ನು ಸೋಪುಗಲ್ಲಿನಿಂದ ಹಾಗೂ ಕೆಲವು ಗ್ರಾನೈಟ್ ಚಪ್ಪಡಿಗಳಿಂದ ಇದನ್ನು ಕಟ್ಟಲಾಗಿದೆ. ಆದುದರಿಂದ ಬಹುಶಃ ಇದನ್ನು ಹೊಯ್ಸಳರ ಕಾಲದ ನಂತರದ ಕಾಲವಾದ ವಿಜಯನಗರದ ಕಾಲದಲ್ಲಿ ಕಟ್ಟಿರಬಹುದು. ಇಲ್ಲಿಯ ಕಂಭಗಳು ಹಾಗೂ ಇನ್ನಿತರ ಕಲ್ಲು ಚಪ್ಪಡಿಗಳನ್ನು ಯಾವುದೋ ಭಗ್ನವಾದ ದೇವಾಲಯಗಳಿಂದ ತಂದು ಕಟ್ಟಿರಬಹುದು. ಮತ್ತೊಂದು ಗಮನಿಸಬೇಕಾದ ವಿಷಯವೆಂದರೆ ಇಡಿ ಗ್ರಾಮದಲ್ಲಿ ಪ್ರಸ್ತುತ ಕಡೆತ ಯಂತ್ರದಿಂದ ದುಂಡಗೆ ಕಡೆಯಲ್ಪಟ್ಟಿರುವ ಹೊಯ್ಸಳರ ಕಾಲದ ಸುಮಾರು ಆರು ಕಂಭಗಳು ಅಲ್ಲಲ್ಲಿ ಬಿದ್ದಿವೆ. ಕೆಲವು ಕಂಭಗಳ ಮೇಲೆ ತುಳಸಿಕಟ್ಟೆಯನ್ನು ಮಾಡಿಕೊಂಡಿದ್ದರೆ ಮತ್ತೆ ಕೆಲವು ಕಂಭಗಳ ಮೇಲೆ ಚಪ್ಪಡಿಯನ್ನು ಹಾಕಿ ಸೆಗಣಿಯನ್ನು ಒಣಗಿಸಲು ಬಳಸಿಕೊಂಡಿದ್ದಾರೆ. ಇದನ್ನು ಗಮನಿಸಿದಾಗ ಬಹುಶಃ ಹೊಯ್ಸಳರ ಕಾಲದ ದೇವಾಲಯವೊಂದು ಭಗ್ನವಾಗಿರಬಹುದೆಂದು ಊಹಿಸಬಹುದು. ಬ್ರಹ್ಮೇಶ್ವರ ದೇವಾಲಯವಲ್ಲದೆ ಇಲ್ಲಿ ಶಿಥಿಲವಾಗಿರುವ ಜನಾರ್ಧನ ಹಾಗೂ ಮಲ್ಲೇಶ್ವರ ದೇವಾಲಯವಿರುವುದು ಗಮನಾರ್ಹವಾದ ವಿಷಯ.

ದೇವಾಲಯದ ಪಶ್ಚಿಮ ಭಾಗದಲ್ಲಿ ಒಂದು ಸಣ್ಣದಾದ ಗುಡಿಯಿದ್ದು ಅಲ್ಲಿ ಸುಮಾರು ಐದು ಅಡಿ ಎತ್ತರದ ವೀರಭದ್ರ ಶಿಲ್ಪವಿದೆ. ಇದು ಕ್ರಿ.ಶ. 17–18ನೆಯ ಶತಮಾನದ ಶಿಲ್ಪವಾಗಿದೆ. ದೇವಾಲಯದ ನೈರುತ್ಯ ದಿಕ್ಕಿನಲ್ಲಿ ಒಂದು ಖಾಲಿ ಮಂಟಪವಿದೆ. ದೇವಾಲಯದ ಈಶಾನ್ಯಭಾಗದಲ್ಲಿ ಕಾಳಭೈರವನ ಸಣ್ಣದಾದ ಗುಡಿಯಿದೆ. ಚೇಳಿನ ಪೀಠದ ಮೇಲೆ ಸುಮಾರು ಐದು ಅಡಿ ಎತ್ತರದ ಕಾಳಭೈರವನ ಶಿಲ್ಪವಿದೆ. ಈ ಗುಡಿಯು ಚಿಕ್ಕದಾದರೂ ಸಹ ಇಲ್ಲಿ ಹೊಯ್ಸಳರ ಕಾಲದ ಕಂಭಗಳಿವೆ. ವಾಸ್ತು ಶೈಲಿಯ ದೃಷ್ಠಿಯಿಂದ ಅಷ್ಟೇನು ಪ್ರಾಮುಖ್ಯವಲ್ಲದಿದ್ದರೂ ಸಹ ಇದು ಹೊಯ್ಸಳರ ಕಾಲದ ವಾಸ್ತುವನ್ನು ಹೊಂದಿದೆ. ದೇವಾಲಯದ ಸುತ್ತಲೂ ಪ್ರಾಕಾರವಿದೆ. ಮುಖ್ಯದ್ವಾರವು ದಕ್ಷಿಣಭಾಗದಲ್ಲಿದೆ. ಇಲ್ಲಿ ಒಳಜಗತಿಯಿದ್ದು ಸುಮಾರು ಹನ್ನೆರಡು ಸ್ವತಂತ್ರ ಕಂಭಗಳಿವೆ. ಮೇಲ್ಭಾಗದಲ್ಲಿ ಇತ್ತೀಚೆಗೆ ನಿರ್ಮಿಸಿರುವ ನಂದಿಶಿಲ್ಪವಿದೆ.

**ಜನಾರ್ಧನ ದೇವಾಲಯ**



ಜನಾರ್ಧನ ದೇವಾಲಯವು ಬ್ರಹ್ಮೇಶ್ವರ ದೇವಾಲಯದ ದಕ್ಷಿಣಕ್ಕೆ ಸುಮಾರು 500 ಅಡಿ ಅಂತರದಲ್ಲಿ ಇದೆ. ದೇವಾಲಯವು ಪೂರ್ವಾಭಿಮುಖವಾಗಿದೆ. ದೇವಾಲಯದ ಅಧಿಷ್ಠಾನವು ಗ್ರಾನೈಟ್ ಶಿಲೆಯಿಂದ ಕಟ್ಟಲಾಗಿದ್ದು ನಂತರದ ಕಟ್ಟಡವನ್ನು ಸೋಪುಗಲ್ಲಿನಿಂದ ಕಟ್ಟಲಾಗಿದೆ. ದೇವಾಲಯವು ಏಕಕೂಟವಾಗಿದ್ದು ಬಹಳಷ್ಟು ಭಾಗ ಶಿಥಿಲವಾಗಿದೆ. ದೇವಾಲಯವನ್ನು ಹೊಯ್ಸಳರ ಕಾಲದಲ್ಲಿ ನಿರ್ಮಿಸಲಾಗಿದೆ. ಅಧಿಷ್ಠಾನವು ಸಾಮಾನ್ಯ ಅಲಂಕರಣೆಯನ್ನು ಹೊಂದಿದೆ. ಇದು ಕಂಪ, ತ್ರಿಪಟ್ಟಕುಮುದ, ಉಪಾನವನ್ನು ಹೊಂದಿದ್ದು ಮೇಲ್ಭಾಗದ ಮೂರು ಪಟ್ಟಿಕೆಯ ಉಪಾನದಲ್ಲಿ ಸಣ್ಣದಾದ ಶಿಲ್ಪಗಳನ್ನು ಕೆತ್ತಲಾಗಿದೆ. (ಚಿತ್ರ – 26) ಇಲ್ಲಿ ಪರಿವಾರ ದೇವತೆಗಳು, ಹಂಸ, ವ್ಯಾಘ್ರ, ಸಂಗೀತಗಾರರು, ನೃತ್ಯಗಾರರು, ಹಾಗೂ ಅಲ್ಲಲ್ಲಿ ಮಿಥುನ ಶಿಲ್ಪಗಳನ್ನು ಕೆತ್ತಲಾಗಿದೆ. ಇವುಗಳನ್ನೂ ಸಹ ವಿರೂಪಗೊಳಿಸಿದ್ದಾರೆ. ದೇವಾಲಯದ ಹೊರಭಿತ್ತಿ ಹಾಗೂ ಮುಖಮಂಟಪವು ಸಹ ಸಂಪೂರ್ಣವಾಗಿ ಭಗ್ನವಾಗಿದೆ.

ಗರ್ಭಗೃಹವು ಚೌಕಾಕಾರವಾಗಿದೆ. ಇಲ್ಲಿ ಯಾವುದೇ ಶಿಲ್ಪವಿಲ್ಲದೆ ಖಾಲಿ ಗರ್ಭಗೃಹವಿದೆ. (ಚಿತ್ರ – 27) ಇಲ್ಲಿ ಇದ್ದಂತಹ ಕೇಶವ ಶಿಲ್ಪವನ್ನು ದಾಸೋಜ ಎಂಬುವವನು ಮಾಡಿದನು. ಇದು ಈಗ ನ್ಯೂಯಾರ್ಕ್ ಮ್ಯೂಸಿಯಂನಲ್ಲಿದೆ.[15] ಗರ್ಭಗೃಹದ ದ್ವಾರಬಂದದಲ್ಲಿ ಏಳು ಅಲಂಕರಣ ಪಟ್ಟಿಕೆಯಿದೆ. ಒಂದು ಪಟ್ಟಿಕೆಯಲ್ಲಿ ಅರೆಕಂಭಗಳನ್ನು ಚಿತ್ರಿಸಿದ್ದು ಉಳಿದ ಪಟ್ಟಿಕೆಗಳನ್ನು ಲತಾಸುರುಳಿ ಬಳ್ಳಿಯಿಂದ ಚಿತ್ರಿಸಲಾಗಿದೆ. ಕೆಳಭಾಗದಲ್ಲಿ ಎರಡು ಬದಿಯಲ್ಲಿ ವೈಷ್ಣವ ದ್ವಾರಪಾಲಕರ ಚಿತ್ರವಿದೆ. ಇವರ ಪಕ್ಕದಲ್ಲಿ ಚಾಮರಧಾರಿಣಿಯರ ಶಿಲ್ಪಗಳನ್ನು ಕೆತ್ತಲಾಗಿದೆ. ಲಲಾಟಬಿಂಬದಲ್ಲಿ

ಲಕ್ಷ್ಮೀನಾರಾಯಣನ ಶಿಲ್ಪವಿದೆ. ಮೇಲ್ಭಾಗದಲ್ಲಿ ಮೂರು ಸಣ್ಣ ಬುರುಜುಗಳಿದ್ದು ಇವುಗಳ ಮಧ್ಯದಲ್ಲಿ ವೈಷ್ಣವ ದೇವತೆಗಳ ಶಿಲ್ಪವಿದೆ. ಗರ್ಭಗೃಹದಷ್ಟೆ ವಿಸ್ತೀರ್ಣವನ್ನು ಸುಖನಾಸಿಯು ಹೊಂದಿದೆ ಇದರಲ್ಲಿ ಯಾವುದೆ ಅಲಂಕರಣವಿಲ್ಲ. ಭುವನೇಶ್ವರಿಯು ಪದ್ಮದ ಅಲಂಕರಣವನ್ನು ಹೊಂದಿದೆ. ನಂತರದಲ್ಲಿ ಒಂಭತ್ತು ಅಂಕಣದ ನವರಂಗವಿದ್ದು ಇಲ್ಲಿ ಕಡೆತ ಯಂತ್ರದಿಂದ ಕಡೆಯಲ್ಪಟ್ಟಿರುವ ನಾಲ್ಕು ಕಂಭಗಳಿವೆ. (ಚಿತ್ರ – 27) ಮಧ್ಯದ ಅಂಕಣದ ಭುವನೇಶ್ವರಿಯಲ್ಲಿ ಪದ್ಮಮಂಡಲವಿತಾನವಿದೆ. ಇನ್ನುಳಿದ ಯಾವುದೆ ಅಂಕಣದಲ್ಲಿಯೂ ಸಹ ಭುವನೇಶ್ವರಿಗಳಿಲ್ಲ. ನವರಂಗದ ಒಳಭಿತ್ತಿಗೆ ಹೊಂದಿಕೊಂಡಂತೆ ನಕ್ಷತ್ರಾಕಾರದ ವಿನ್ಯಾಸವಿರುವ ಸುಮಾರು ಹನ್ನೆರಡು ಕಂಭಗಳಿವೆ. ದೇವಾಲಯಕ್ಕೆ ಮುಖಮಂಟಪವಿದ್ದು ಈಗ ಸಂಪೂರ್ಣವಾಗಿ ಭಗ್ನವಾಗಿದೆ.

ದೇವಾಲಯದ ಭಿತ್ತಿಯ ಹಲವು ಭಾಗವು ಸಂಪೂರ್ಣವಾಗಿ ಭಗ್ನವಾಗಿದೆ. ಇಲ್ಲಿ ಕೇವಲ ಗರ್ಭಗೃಹ ಮತ್ತು ಶುಕನಾಸಿಯ ಹೊರ ಭಿತ್ತಿಯು ಮಾತ್ರ ಚೆನ್ನಾಗಿದ್ದು ಇದರಲ್ಲಿ ಅಲಂಕಾರಿಕ ಭಿತ್ತಿಶಿಲ್ಪಗಳಿವೆ. ಭಿತ್ತಿಯಲ್ಲಿರುವ ಶಿಲ್ಪಗಳೆಲ್ಲವೂ ಸಹ ಸ್ಥಳೀಯರ ನಿರ್ಲಕ್ಷ್ಯಕ್ಕೆ ಒಳಗಾಗಿ ಹಾನಿಗೊಳಗಾಗಿವೆ. ಇವುಗಳ ಮುಖ್ಯ ಲಕ್ಷಣಗಳನ್ನು ಗುರುತಿಸಲು ಸಾಧ್ಯವಾಗುತ್ತದೆಯೇ ಹೊರತು ಇಡೀ ಶಿಲ್ಪದ ಲಕ್ಷಣಗಳನ್ನು ಗುರುತಿಸಲಾಗದಷ್ಟು ವಿರೂಪಗೊಳಿಸಲಾಗಿದೆ. ಇಲ್ಲಿರುವ ಪ್ರತಿ ಶಿಲ್ಪಗಳ ಮೇಲೆ ಬ್ರಹ್ಮೇಶ್ವರ ದೇವಾಲಯದ ಭಿತ್ತಿಶಿಲ್ಪಗಳ ಮೇಲಿರುವ ವಿಮಾನದ ರೀತಿಯ ಲಕ್ಷಣಗಳನ್ನು ಇಲ್ಲಿಯೂ ಸಹ ಕೆತ್ತಲಾಗಿದೆ. (ಚಿತ್ರ – 26) ಭಿತ್ತಿಯಲ್ಲಿ ಅಲ್ಲಲ್ಲಿ ಅರೆಕಂಭಗಳಿಂದ ಅಲಂಕರಿಸಿದ್ದು ಮಧ್ಯದಲ್ಲಿ ಶಿಲ್ಪಗಳನ್ನು ಕೆತ್ತಲಾಗಿದೆ. ಶಿಲ್ಪದ ನಂತರದಲ್ಲಿ ತುಂಡು ಕಂಭಗಳ ಮೇಲೆ ವಿಮಾನದ ಅಲಂಕರಣೆಯಿದೆ.

ದಕ್ಷಿಣ ಭಾಗದ ಭಿತ್ತಿಯಲ್ಲಿರುವ ಶಿಲ್ಪಗಳು, ಮೊದಲಿಗೆ ನಿಂತ ಭಂಗಿಯಲ್ಲಿರುವ ಶಿವ, ಪರಿಚಾರಕಿಯರು, ಉಗ್ರನರಸಿಂಹ, ಕಾಳಿಂಗಮರ್ಧನ, ಯೋಗನರಸಿಂಹ, ಪೂರ್ವ ಭಾಗದಲ್ಲಿ ವೇಣುಗೋಪಾಲ, ಚಾಮರಧಾರಿಣಿ, ವಿಷ್ಣು, ಚಾಮರಧಾರಿಣಿ, ಉತ್ತರ ಭಾಗದಲ್ಲಿರುವ ಭಿತ್ತಿಯಲ್ಲಿ ಸಮಭಂಗಿಯಲ್ಲಿರುವ ವಿಷ್ಣು, ನೃತ್ಯಗಾರ್ತಿಯರು, ಡಮರುವನ್ನು ಧಾರಿಸುತ್ತಿರುವವರು, ಅರ್ಜುನನ ಮತ್ಯ ಯಂತ್ರ ಛೇದನ, ನಾಟ್ಯ ಗಣೇಶ, ಮಹಿಷಾಮರ್ದಿನಿ, ದರ್ಪಣ ಸುಂದರಿ, ನೃತ್ಯಗಾರ್ತಿ, ಪರಿಚಾರಕಿ, ವಿಷ್ಣು, ಚಾಮರಧಾರಿಣಿ, ವೇಣುಗೋಪಾಲ ಮುಂತಾದ ಇನ್ನೂ ಅನೇಕ ಶಿಲ್ಪಗಳಿದ್ದು ಅವುಗಳು ಗುರುತು ಹಿಡಿಯಲಾರದಷ್ಟು ವಿರೂಪಗೊಳಿಸಲಾಗಿದೆ.

ದೇವಾಲಯದ ಶಿಖರವು ಮೂರು ಹಂತದ ಶಾಲಾಗಳನ್ನು ಹೊಂದಿದೆ. (ಚಿತ್ರ – 26) ಆದರೆ ಅಲ್ಲಿ ಯಾವುದೇ ಅಲಂಕರಣವನ್ನು ಕೆತ್ತಲಾಗಿಲ್ಲ. ಇದು ದ್ರಾವಿಡ ಮಾದರಿಯ

ಶಿಖರವಾಗಿದೆ.[16] ಮೇಲ್ಭಾಗದಲ್ಲಿ ಸ್ತೂಪಿಯಿದ್ದು ನಂತರದಲ್ಲಿ ಕಲ್ಲಿನ ಕಳಸವಿದೆ. ಶುಕನಾಸದಲ್ಲಿ ಯಾವುದೇ ಶಿಲ್ಪವಿಲ್ಲ. ಪ್ರಸ್ತುತ ದೇವಾಲಯದ ವಾಸ್ತು ಶೈಲಿಯನ್ನು ಗಮನಿಸಿದರೆ ಇದು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದಂತಹ ಒಂದು ವೈಷ್ಣವ ದೇವಾಲಯವಾಗಿದೆ. ಇಲ್ಲಿನ ಭಿತ್ತಿ ಶಿಲ್ಪಗಳು ಸಹ ಹೆಚ್ಚಿನ ಸಂಖ್ಯೆಯಲ್ಲಿ ವೈಷ್ಣವ ದೇವತೆಗಳೆ ಆಗಿವೆ. ದೇವಾಲಯವು ಜೀರ್ಣೋದ್ಧಾರವಾಗದಿದ್ದರೆ ಈಗ ಉಳಿದಿರುವ ಭಾಗವು ಸಹ ಕೆಲ ವರ್ಷಗಳ ನಂತರದಲ್ಲಿ ಸಂಪೂರ್ಣವಾಗಿ ನಾಶವಾಗುತ್ತದೆ.

ಈ ದೇವಾಲಯವನ್ನು ಯಾವ ಕಾಲದಲ್ಲಿ ಯಾರು ಕಟ್ಟಿಸಿದರೆಂದು ತಿಳಿಯಲು ಯಾವುದೇ ಶಾಸನಾಧಾರಗಳು ಇಲ್ಲ. ಆದರೆ ಇಲ್ಲಿಯ ವಾಸ್ತು ಶೈಲಿ ಹಾಗೂ ಶಿಲ್ಪ ಶೈಲಿಗಳನ್ನು ಗಮನಿಸಿದಾಗ ಇದೊಂದು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯ ಎಂದು ಹೇಳಬಹುದು.[17] ಈ ದೇವಾಲಯದ ಭಿತ್ತಿಯ ಶಿಲ್ಪಗಳು ಹಾಗೂ ಬ್ರಹ್ಮೇಶ್ವರ ದೇವಾಲಯದ ಭಿತ್ತಿ ಶಿಲ್ಪಗಳ ಲಕ್ಷಣಗಳು ಒಂದೇ ರೀತಿಯ ಲಕ್ಷಣಗಳನ್ನು ಹೊಂದಿವೆ. ಹಾಗೂ ಭಿತ್ತಿಯಲ್ಲಿನ ಅರೆಕಂಭಗಳ ರಚನೆ ಹಾಗೂ ಶಿಲ್ಪಗಳ ಮೇಲೆ ವಿಮಾನದ ರಚನೆ, ಅಲ್ಲಲ್ಲಿ ಭಿತ್ತಿಯ ಮೇಲಿರುವ ಸಣ್ಣ ಕಂಭಗಳ ಮೇಲಿರುವ ಲಕ್ಷಣಗಳು ಬ್ರಹ್ಮೇಶ್ವರ ದೇವಾಲಯದಲ್ಲಿರುವ ಹೊರ ಭಿತ್ತಿಯ ಲಕ್ಷಣವನ್ನು ಹೊಂದಿರುವುದರಿಂದ ಜನಾರ್ಧನ ದೇವಾಲಯವು ಸಹ ಆ ಕಾಲದಲ್ಲಿಯೇ ನಿರ್ಮಾಣವಾಗಿರಬಹುದು. ಹಾಗೂ ಬ್ರಹ್ಮೇಶ್ವರ ದೇವಾಲಯವನ್ನು ಮಾಡಿದ ರೂವಾರಿಗಳೇ ಈ ದೇವಾಲಯವನ್ನು ಮಾಡಿರಬಹುದು. ಕೆಲವು ಸಮಯದಲ್ಲಿ ಮುಖ್ಯ ಶಿಲ್ಪಿಗಾರನ ನಾಯಕತ್ವದಡಿಯಲ್ಲಿ ಕೆಲಸ ಮಾಡುತ್ತಿದ್ದ ಸಣ್ಣ ಪುಟ್ಟ ಶಿಲ್ಪಿಗಳು ಮುಖ್ಯ ಶಿಲ್ಪಿಯ ಸೂಚನೆಯನ್ನು ಅನುಸರಿಸಿಯೇ ಇನ್ನಿತರರು ಕೆಲಸ ಮಾಡಿರಲುಬಹುದು. ಆ ರೀತಿಯಲ್ಲಿ ಈ ಎರಡು ದೇವಾಲಯಗಳು ನಿರ್ಮಾಣವಾಗಿರಬಹುದು.

**ಮಲ್ಲೇಶ್ವರ ದೇವಾಲಯ**

ಗ್ರಾಮದಲ್ಲಿರುವ ದೊಡ್ಡ ಕೆರೆಯ ಪೂರ್ವಭಾಗದ ದಡದ ಕೆಳಭಾಗದಲ್ಲಿ ಈ ದೇವಾಲಯವಿದೆ. ಇದು ಜಮೀನಿನಲ್ಲಿದ್ದು ಬಹಳ ಶಿಥಿಲವಾದ ದೇವಾಲಯವಾಗಿದೆ. ದೇವಾಲಯವು ಗರ್ಭಗೃಹ, ಶುಕನಾಸಿ, ನವರಂಗ ಹಾಗೂ ತೆರೆದ ಮುಖಮಂಟಪವಿದೆ. ದೇವಾಲಯವನ್ನು ಗ್ರಾನೈಟ್ ಶಿಲೆಯಿಂದ ಕಟ್ಟಲಾಗಿದೆ. ಇದು ಪೂರ್ವಾಭಿಮುಖವಾಗಿದ್ದು ಎತ್ತರದಲ್ಲಿ ಸುಮಾರು ಆರು ಅಡಿ ಎತ್ತರವನ್ನು ಹೊಂದಿದೆ. ಗರ್ಭಗೃಹ, ಸುಖನಾಸಿಯು ಒಂದೇ ಅಳತೆಯನ್ನು ಹೊಂದಿದ್ದು ಇಲ್ಲಿ ಯಾವುದೇ ಶಿಲ್ಪಗಳಿಲ್ಲ. (ಚಿತ್ರ – 28) ಹಾಗೂ ಯಾವುದೇ ಅಲಂಕರಣವಿರುವುದಿಲ್ಲ. ನವರಂಗವು

ಒಂಭತ್ತು ಅಂಕಣವಿದ್ದು ಇಲ್ಲಿ ದುಂಡನೆಯ ನಾಲ್ಕು ಕಂಭಗಳಿವೆ. ಇವುಗಳ ಕೆಳಭಾಗವು ಚೌಕಾಕಾರವಾಗಿದ್ದು ನಂತರದಲ್ಲಿ ದುಂಡಗಿದ್ದು ಮಧ್ಯದಲ್ಲಿ ಮೂರು ದುಂಡನೆಯ ಪಟ್ಟಿಕೆಯನ್ನು ಹೊಂದಿವೆ. ಮೇಲ್ಭಾಗದಲ್ಲಿ ದುಂಡನೆಯ ಮುಚ್ಚಳವಿದೆ. (ಚಿತ್ರ – 28) ನವರಂಗದ ಮಧ್ಯಭಾಗದಲ್ಲಿ ಒಂದು ಖಾಲಿ ಪಾಣಿಪೀಠವಿದೆ. ಮಧ್ಯದ ಅಂಕಣದ ಭುವನೇಶ್ವರಿಯಲ್ಲಿ ಮಾತ್ರ ಪದ್ಮದ ಅಲಂಕರಣೆಯಿದ್ದು ಉಳಿದ ಭುವನೇಶ್ವರಿಗಳು ಯಾವುದೇ ಅಲಂಕರಣೆಯನ್ನು ಹೊಂದಿಲ್ಲ. ನವರಂಗದ ಒಳಭಿತ್ತಿಯ ದಕ್ಷಿಣ ಭಾಗದಲ್ಲಿ ಸಪ್ತಮಾತೃಕೆಯರಾದ (ಚಿತ್ರ – 31) ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ ಮತ್ತು ಚಾಮುಂಡಿಯ ಶಿಲ್ಪಗಳಿದ್ದು ಪಕ್ಕದಲ್ಲಿ ಗಣಪತಿ ಮತ್ತು ಶಿವನನ್ನು ಚಿತ್ರಿಸಿರುತ್ತಾರೆ. ಇವುಗಳನ್ನು ಭಿತ್ತಿಯ ಚಪ್ಪಡಿಯಲ್ಲಿ ಕೆತ್ತಲಾಗಿದ್ದು ಬಹಳ ಅಲಂಕಾರಿಕವಾಗಿ ಕೆತ್ತಲಾಗಿದೆ. ಈ ಶಿಲ್ಪಗಳು ಸುಮಾರು 1.5 ಅಡಿಯಷ್ಟು ಎತ್ತರವಿದ್ದು ಪ್ರತಿಯೊಂದಕ್ಕೂ ಸಹ ಸುಂದರವಾದ ಪ್ರಭಾವಳಿಯನ್ನು ಕೆತ್ತಲಾಗಿದೆ. ಎಲ್ಲರೂ ಸಹ ಪೀಠದ ಮೇಲೆ ಕುಳಿತಿದ್ದು ಬಲಗಾಲನ್ನು ಇಳಿಬಿಟ್ಟು ಎಡಗಾಲನ್ನು ಮಡಿಚಿಕೊಂಡಿದ್ದಾರೆ. ಪ್ರತಿಯೊಂದು ಶಿಲ್ಪದ ಕೆಳಗೆ ಸಣ್ಣದಾಗಿ ಅವರ ವಾಹನವನ್ನು ಚಿತ್ರಿಸಲಾಗಿದೆ. ಹಾಗೂ ಅವರ ಲಕ್ಷಣಗಳನ್ನು ಆಯಾ ದೇವತೆಗಳಗಣುಗುನವಾಗಿ ಚಿತ್ರಿಸಿದ್ದು ಆಯುಧಗಳನ್ನು ಸಹ ಆಯಾ ದೇವತೆಗಳಗನುಗುಣವಾಗಿ ಚಿತ್ರಿಸಿದ್ದಾರೆ. ಬಹುಶಃ ದೇವಾಲಯದ ಭಿತ್ತಿಗಳಲ್ಲಿ ಇಷ್ಟು ದೊಡ್ಡದಾಗಿ ಹಾಗೂ ಅಲಂಕಾರಿಕವಾಗಿ ಕೆತ್ತಲ್ಪಟ್ಟಿರುವ ಸಪ್ತಮಾತೃಕೆಯ ಶಿಲ್ಪಗಳು ದೊರೆಯುವುದು ವಿರಳ. ಎಲ್ಲ ಶಿವ ದೇವಾಲಯಗಳಲ್ಲೂ ಸಹ ಸಾಮಾನ್ಯವಾಗಿ ಸಪ್ತಮಾತೃಕೆಯರ ಶಿಲ್ಪಗಳನ್ನು ಕೆತ್ತಿದ್ದಾರೆ. ಆದರೆ ಈ ದೇವಾಲಯದಲ್ಲಿರುವ ಶಿಲ್ಪಗಳು ತುಸು ಎತ್ತರದಲ್ಲಿ ಹಾಗೂ ಅಲಂಕಾರದಲ್ಲಿ ಉತ್ತಮವಾಗಿವೆ. ನವರಂಗದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯನ್ನು ಚಿತ್ರಿಸಲಾಗಿದೆ.

ದೇವಾಲಯದಲ್ಲಿ ತೆರೆದ ಮುಖಮಂಟಪವಿದ್ದು ಇದು ಹನ್ನೆರಡು ಅಂಕಣವಿದೆ. ಇಲ್ಲಿ ಹೊಯ್ಸಳರ ಕಾಲದ ಮೂರು ರೀತಿಯ ಲಕ್ಷಣಗಳುಳ್ಳ ಕಂಭಗಳನ್ನು ಕಾಣಬಹುದು. (ಚಿತ್ರ – 29,30) ಮಧ್ಯದ ನಾಲ್ಕು ಕಂಭಗಳು ದುಂಡಗಿವೆ. ನವರಂಗದ ದ್ವಾರದ ಮುಂದಿರುವ ಕಂಭಗಳು ಅಲಂಕಾರಿಕವಾಗಿದ್ದರೆ ಸುತ್ತಲೂ ಇರುವ ಕಂಭಗಳು ಷೋಡಶಕೃತಿಯಲ್ಲಿವೆ. ಇವುಗಳ ಎತ್ತರ ಸುಮಾರು ಆರು ಅಡಿ ಇವೆ. ದೇವಾಲಯದ ಮೇಲ್ಚಾವಣಿ ಹಾಗೂ ಭಿತ್ತಿಯು ಸಂಪೂರ್ಣವಾಗಿ ಶಿಥಿಲವಾಗಿದೆ. ದೇವಾಲಯ ಶಿಖರವು ಭಗ್ನವಾಗಿದೆ. ದೇವಾಲಯವು ಕೆರೆಯ ಪಕ್ಕದಲ್ಲಿರುವುದರಿಂದ ಸಂಪೂರ್ಣವಾಗಿ ನೀರಿನ ಸೆಲೆಯು ದೇವಾಲಯಕ್ಕೆ ಬರುತ್ತಿರುವುದರಿಂದ ಬಹಳ ಶಿಥಿಲವಾಗಿದೆ. ಇದು ವಾಸ್ತು ಶೈಲಿಯ ದೃಷ್ಟಿಯಿಂದ ಅಷ್ಟೇನು ಮಹತ್ವವಾಗಿಲ್ಲದಿದ್ದರೂ ಸಹ

ಇದನ್ನು ಪೂರ್ವ ಹೊಯ್ಸಳರ ಕಾಲದಲ್ಲಿ ಕಟ್ಟಲಾಗಿದೆ ಎನ್ನಬಹುದು.[18] ಹೊಯ್ಸಳರು ದಕ್ಷಿಣದ ಚೋಳರು, ಪಾಂಡ್ಯರು, ಹಾಗೂ ದಕ್ಷಿಣ ಕರ್ನಾಟಕದಲ್ಲಿದ್ದ ಗಂಗರೂ ರೂಪಿಸಿದ ವಿನ್ಯಾಸ ಮತ್ತು ಚಾಳುಕ್ಯ ಶೈಲಿಯ ಹಲವಂಶಗಳು ಹೊಯ್ಸಳ ಶೈಲಿಯಲ್ಲಿ ಸುಗಮವಾಗಿ ಸಮ್ಮಿಶ್ರಗೊಳಸಿರುವುದನ್ನು ಹಲವು ದೇವಾಲಯಗಳಲ್ಲಿ ಕಾಣುತ್ತೇವೆ. ಅದೇ ರೀತಿಯಲ್ಲಿ ಈ ದೇವಾಲಯವು ಸ್ವಲ್ಪ ಗಂಗರ ಕಾಲದ ವಾಸ್ತುಶೈಲಿಯನ್ನು ನಿರೂಪಿಸುವಂತಹ ವಾಸ್ತುಕೃತಿಯಾಗಿದೆ. ಇದರಲ್ಲಿನ ಕಂಭಗಳ ಶೈಲಿ (ಚಿತ್ರ – 28) ಹಾಗೂ ದೇವಾಲಯದ ವಿನ್ಯಾಸ ಹಾಗೂ ಎತ್ತರ ಬಳಸಿರುವ ಮಾಧ್ಯಮವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಗಂಗರ ಕೆಲವು ಅಂಶಗಳನ್ನು ಈ ದೇವಾಲಯದಲ್ಲಿ ಗುರುತಿಸಬಹುದಾಗಿದೆ.

## ಲಕ್ಷ್ಮೀನರಸಿಂಹ

ದೇವಾಲಯವು ಗರ್ಭಗೃಹ, ಸುಖನಾಸಿ, ನವರಂಗ ಹಾಗೂ ಮುಖಮಂಟಪವನ್ನು ಹೊಂದಿದೆ. ದೇವಾಲಯವು ಪೂರ್ವಾಭಿಮುಖವಾಗಿದ್ದು ಸೋಪುಗಲ್ಲಿನಿಂದ ಕಟ್ಟಲಾಗಿದೆ. ಇದರ ಗರ್ಭಗೃಹ, ಸುಖನಾಸಿ, ನವರಂಗ ಮಾತ್ರ ಹೊಯ್ಸಳರ ಕಾಲದಲ್ಲಿ ನಿರ್ಮಾಣ ಮಾಡಲಾಗಿದ್ದು ಮುಖಮಂಟಪ ಹಾಗೂ ಮುಖ್ಯದ್ವಾರಮಂಟಪ ಹಾಗೂ ಕಟ್ಟಡದ ಇನ್ನಿತರ ಭಾಗಗಳನ್ನು ಇತ್ತೀಚೆಗೆ ಕಟ್ಟಲಾಗಿದೆ.

ಗರ್ಭಗೃಹದಲ್ಲಿ ಸುಮಾರು ಐದು ಅಡಿ ಎತ್ತರದ ನರಸಿಂಹನು ಶುಕಾಸನದಲ್ಲಿ ಕುಳತಿರುವ ಶಿಲ್ಪವಿದೆ. ಪೀಠದಲ್ಲಿ ಗರುಡನು ವೀರಾಸನದಲ್ಲಿ ಕುಳತಿದ್ದಾನೆ. ಹಿಂಬದಿಯಕೈಗಳಲ್ಲಿ ಶಂಖ, ಚಕ್ರವನ್ನು ಹಿಡಿದಿದ್ದಾನೆ. ಮುಂಬದಿಯ ಬಲಗೈಯನ್ನು ಅಭಯ ಹಸ್ತವನ್ನು ಹೊಂದಿದ್ದು ಎಡಕೈಯಲ್ಲಿ ಲಕ್ಷ್ಮಿಯ ಬೆನ್ನನ್ನು ಬಳಸಿ ಹಿಡಿದುಕೊಂಡಿದ್ದಾನೆ. ಲಕ್ಷ್ಮಿಯು ನರಸಿಂಹನ ಎಡತೊಡೆಯ ಮೇಲೆ ಕುಳತಿದ್ದಾಳೆ. ಗರ್ಭಗೃಹದಷ್ಟೇ ಅಳತೆಯ ವಿಸ್ತೀರ್ಣವನ್ನು ಸುಖನಾಸಿಯು ಹೊಂದಿದೆ. ಇದರ ಭುವನೇಶ್ವರಿಯಲ್ಲಿ ಪದ್ಮದ ಚಿತ್ರವಿದೆ. ಲಲಾಟಬಿಂಬದಲ್ಲಿ ಕಾಳಿಂಗಮರ್ಧನ ಕೃಷ್ಣನ ಚಿತ್ರವಿದೆ. ಮೇಲ್ಭಾಗದಲ್ಲಿ ಸಣ್ಣ ಸಣ್ಣದಾದ ಬುರುಜುಗಳನ್ನು ಕೆತ್ತಿದ್ದಾರೆ. ದ್ವಾರದ ಎರಡು ಬದಿಯಲ್ಲೂ ಸಹ ಎರಡು ಅಲಂಕರಣ ಪಟ್ಟಿಕೆಯಿದೆ. ಒಂದು ಪಟ್ಟಿಕೆಯಲ್ಲಿ ಅರೆಕಂಭಗಳನ್ನು ಕೆತ್ತಲಾಗಿದ್ದು ಮತ್ತೊಂದರಲ್ಲಿ ಲತಾಬಳ್ಳಿಗಳ ಚಿತ್ರಗಳವೆ. ದ್ವಾರದ ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರ ಚಿತ್ರಗಳವೆ.

ನವರಂಗವು ಒಂಭತ್ತು ಅಂಕಣವಿದ್ದು ಇಲ್ಲಿ ಕಡೆತ ಯಂತ್ರದಿಂದ ದುಂಡಗೆ ಕಡೆಯಲ್ಪಟ್ಟಿರುವ ನಾಲ್ಕು ಸ್ವತಂತ್ರ ಕಂಭಗಳವೆ. ಮಧ್ಯದಂಕಣದಲ್ಲಿ ಪದ್ಮದ ಅಲಂಕರಣವಿದೆ.

ಇನ್ನುಳಿದಂತೆ ಇಲ್ಲಿ ಯಾವುದೇ ಅಲಂಕರಣವಿಲ್ಲ. ದೇವಾಲಯದ ಹೊರಭಾಗದಲ್ಲಿ ಸಾಮಾನ್ಯ ಅಲಂಕರಣದ ಅದಿಷ್ಠಾನವನ್ನು ಹೊಂದಿದೆ. ಭಿತ್ತಿಯಲ್ಲಿ ಅರೆಕಂಭಗಳ ಚಿತ್ರಗಳು ಹಾಗೂ ಪದ್ಮದ ಚಿತ್ರಗಳನ್ನು ಚಿತ್ರಿಸಲಾಗಿದೆ. ಅಲ್ಲಲ್ಲಿ ತುಂಡು ಕಂಭಗಳ ಮೇಲೆ ಸಣ್ಣ ಶಿಖರಗಳನ್ನು ಕೆತ್ತಿದ್ದಾರೆ. ದಕ್ಷಿಣ ಭಿತ್ತಿಯ ಮಧ್ಯದಲ್ಲಿ ನಾಟ್ಯಗಣಪತಿಯ ಶಿಲ್ಪವಿದೆ. ಇದರ ಮೇಲ್ಭಾಗದಲ್ಲಿ ವಿಮಾನದ ರಚನೆಯಿದೆ. ಪಶ್ಚಿಮ ಭಾಗದ ಭಿತ್ತಿಯ ಮಧ್ಯದಲ್ಲಿ ಏಳುಕುದುರೆಗಳ ಪೀಠದ ಮೇಲೆ ನಿಂತಿರುವ ಸೂರ್ಯನ ಶಿಲ್ಪವಿದೆ. ಇದರ ಮೆಲ್ಭಾಗದಲ್ಲೂ ಸಹ ವಿಮಾನದ ರಚನೆಯಿದೆ. ಉತ್ತರ ಭಾಗದ ಭಿತ್ತಿಯ ಮಧ್ಯದಲ್ಲಿ ವೇಣುಗೋಪಾಲನ ಶಿಲ್ಪವಿದೆ. ಕೊಳಲನ್ನು ನುಡಿಸುತ್ತಿರುವ ಕೃಷ್ಣನ ಮೇಲ್ಭಾಗದಲ್ಲಿ ಮರದ ರಚನೆಯಿದ್ದು ಅದರ ಮೇಲ್ಭಾಗದಲ್ಲಿ ವಿಮಾನದ ರಚನೆಯಿದೆ. ಗರ್ಭಗೃಹದ ಮೇಲೆ ಚಿಕ್ಕದಾದ ಕದಂಬ ನಾಗರ ಶೈಲಿಯ ಶಿಖರವಿದೆ.[19] ದೇವಾಲಯದ ಭಿತ್ತಿಯ ಹೊರ ಭಾಗ, ಒಳಭಾಗ, ಶಿಖರ ಹಾಗೂ ಕಂಭಗಳು ಇನ್ನಿತರ ಎಲ್ಲಾ ಭಾಗಗಳಿಗೂ ಸಹ ಇತ್ತೀಚಿನ ಬಣ್ಣವನ್ನು ಹಚ್ಚಿದ್ದಾರೆ. ದೇವಾಲಯದ ಸುತ್ತಲೂ ಇತ್ತೀಚಿನ ಪ್ರಾಕಾರವಿದೆ. ಹಾಗೂ ಇದನ್ನು ಮದುವೆ ಹಾಗೂ ಇನ್ನೀತರ ಧಾರ್ಮಿಕ ಕಾರ್ಯಗಳಿಗೆ ಇದನ್ನು ಬಳಸಿಕೊಳ್ಳುತ್ತಿದ್ದಾರೆ. ದೇವಾಲಯದ ಮುಂಖಮಂಟಪ ಹಾಗೂ ತೆರೆದ ಮುಖಮಂಟಪವು ಇತ್ತೀಚಿನ ಕಾಲದ್ದವಾಗಿವೆ.

ದೇವಾಲಯವನ್ನು ಯಾರು ಯಾವ ಕಾಲದಲ್ಲಿ ನಿರ್ಮಾಣ ಮಾಡಿದರು ಎಂದು ತಿಳಿಯಲು ಯಾವುದೇ ಶಾಸನಾಧಾರಗಳಿಲ್ಲ ಆದರೆ ಇಲ್ಲಿಯ ಮೂಲ ವಾಸ್ತುವನ್ನು ಗಮನಿಸಿದಾಗ ಅದರ ಲಕ್ಷಣಗಳು ಹೊಯ್ಸಳರ ಕಾಲದ ಲಕ್ಷಣಗಳನ್ನು ಹೊಂದಿವೆ.[20] ನಂತರದ ಮುಖಮಂಟಪ, ಪ್ರಾಕಾರ ಮುಖ್ಯದ್ವಾರ ಅಲ್ಲಿನ ಗೂಡ ಶಿಲ್ಪಗಳು ಇತ್ಯಾದಿಗಳು ಕ್ರಿ.ಶ. 18–19ನೆಯ ಶತಮಾನದಲ್ಲಿ ನಿರ್ಮಾಣವಾಗಿವೆ.

ಈ ಗ್ರಾಮದಲ್ಲಿ ಮೇಲೆ ವಿವರಿಸಿದ ದೇವಾಲಯಗಳಲ್ಲದೆ ವಿಜಯನಗರ ಕಾಲದಲ್ಲಿ ನಿರ್ಮಾಣವಾದ ಉಗ್ರನರಸಿಂಹ ದೇವಾಲಯವಿದೆ.[21] ದೇವಾಲಯದ ಕಟ್ಟಡವು ಜೀರ್ಣೋದ್ದಾರವಾಗಿದೆ. ಗರ್ಭಗೃಹದಲ್ಲಿ ಸುಮಾರು ನಾಲ್ಕು ಅಡಿ ಎತ್ತರದ ಯೋಗ ಪಟ್ಟದಲ್ಲಿ ಕುಳಿತಿರುವ ಯೋಗನರಸಿಂಹನ ಶಿಲ್ಪವಿದೆ. ನವರಂಗದಲ್ಲಿ ನಾಲ್ಕು ಅಡಿ ಎತ್ತರದ ಕೇಶವ ಶಿಲ್ಪ ಹಾಗೂ ಎರಡು ಅಡಿ ಎತ್ತರದ ರಾಮನ ಶಿಲ್ಪಗಳಿವೆ. ಇವೆಲ್ಲವೂ ಸಹ ವಿಜಯನಗರದ ಕಾಲದವು. ನಂತರದಲ್ಲಿ ಊರಿನ ಉತ್ತರಕ್ಕೆ ಕ್ರಿ.ಶ.17–18ನೆಯ ಶತಮಾನದಲ್ಲಿ ನಿರ್ಮಾಣವಾಗಿರುವ ಕಿಕ್ಕೇರಮ್ಮ ದೇವಾಲಯವಿದೆ.[22] ಇದು ಈ ಗ್ರಾಮದ ದೇವತೆಯಾಗಿದೆ. ಇದಲ್ಲದೆ ಊರಿನ ಮಧ್ಯದಲ್ಲಿ ಭಗ್ನವಾದ ಕೋಟೆಯ ಭಾಗವಿದ್ದು ಇಲ್ಲಿ ಕೋಟೆ ಆಂಜನೇಯ, ಕೋಟೆ ಗಣಪತಿಯ ಗುಡಿಗಳಿವೆ.

ಇವಲ್ಲದೆ ಇದರ ಮುಂಭಾಗದಲ್ಲಿ ಉಪ್ಪರಿಗೆ ಬಸವನ ಗುಡಿಯಿದೆ. ಇದು ಕಂಭದ ಮೇಲೆ ನಂದಿಯ ಶಿಲ್ಪವನ್ನು ಇಡಲಾಗಿದೆ. ಇದಕ್ಕೊಂದು ಎತ್ತರವಾದ ಮಂಟಪವನ್ನು ಕಟ್ಟಿದ್ದಾರೆ.[23] ಇವೆಲ್ಲವೂ ಸಹ 17-18ನೆಯ ಶತಮಾನದ ನಂತರದ ಕಾಲದವು.


**ಆಕರ ಗ್ರಂಥಗಳು**

1. ಹೊಯ್ಸಳ ಟೆಂಪಲ್ಸ್ ಇನ್ ಮಂಡ್ಯ ಅಂಡ್ ತುಮಕೂರು ಡಿಸ್ಟ್ರಿಕ್ಟ್ – ಡಾ. ಎನ್.ಎಸ್.ರಂಗರಾಜು - ಪು.69
2. ಎಂ.ಎ.ಆರ್ – 1915, ಪು. 21
3. ಎ.ಕ.ಸಂ – 6, ಕೃ.ರಾ –37
4. ಅದೇ, – 28
5. ಅದೇ, –24
6. ಅದೇ, – 30
7. ಅದೇ, – 33
8. ಅದೇ, – 34
9. ಮಂಡ್ಯ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ – ತೈಲೂರು ವೆಂಕಟಕೃಷ್ಣಯ್ಯ, ಪು.30
10. ಮಾರ್ಗ, ಸಂಪುಟ 2, ಸಂ, ಎಂ.ಎಂ.ಕಲಬುರ್ಗಿ, ಪು.374
11. ಎಂ.ಎ.ಆರ್ – 1920 – ಪು.18
12. ಎ ಡಿಕ್ಷನರಿ ಆಫ್ ಹಿಂದು ಆರ್ಕಿಟೆಕ್ಚರ್ - ಪಿ.ಕೆ.ಆಚಾರ್ಯ, ಪು.52
13. ಎಂ.ಎ.ಆರ್ – 1920 – ಪು. 18
14. ಎಂ.ಎ.ಆರ್ – 1920 – ಪು.18
15. ಹೊಯ್ಸಳ ಟೆಂಪಲ್ಸ್ ಇನ್ ಮಂಡ್ಯ ಅಂಡ್ ತುಮಕೂರು ಡಿಸ್ಟ್ರಿಕ್ಟ್ – ಡಾ. ಎನ್.ಎಸ್.ರಂಗರಾಜು ಪು.82
16. ಅದೇ

17. ಎಂ.ಎ.ಆರ್ – 1915 – ಪು.22

18. ಎಂ.ಎ.ಆರ್ – 1915 – ಪು.22

19. ಹೊಯ್ಸಳ ಟೆಂಪಲ್ಸ್ ಇನ್ ಮಂಡ್ಯ ಅಂಡ್ ತುಮಕೂರು ಡಿಸ್ಟ್ರಿಕ್ಟ್ – ಡಾ. ಎನ್.ಎಸ್.ರಂಗರಾಜು ಪು.85

20. ಎಂ.ಎ.ಆರ್ – 1915 – ಪು.21

21. ಎಂ.ಎ.ಆರ್ – 1915, ಪು.22

22. ಅದೇ,

23. ಅದೇ,

# ಅಧ್ಯಾಯ – 5

# ನುಗ್ಗೇಹಳ್ಳಿಯ ದೇವಾಲಯಗಳು

ಈ ಗ್ರಾಮವು ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೋಕಿನಲ್ಲಿದೆ. ಇದು ಚನ್ನರಾಯ ಪಟ್ಟಣದಿಂದ ಸುಮಾರು 18 ಕಿ.ಮೀ ದೂರದಲ್ಲಿದೆ. ಈ ಗ್ರಾಮವನ್ನು 'ಸೋಮನಾಥಪುರ ಅಗ್ರಹಾರವೆಂದು' ಪುನರ್ ನಾಮಕರಣ ಮಾಡಲಾಯಿತು.[1] ಕ್ರಿ.ಶ.1435ರ ಶಾಸನಗಳಲ್ಲಿಯೂ ಸಹ ನುಗ್ಗೇಹಳ್ಳಿಯನ್ನು ಸೋಮನಾಥಪುರ ಅಗ್ರಹಾರವೆಂದು ಮತ್ತು ನುಗ್ಗಿಹಳ್ಳಿ ಎಂದು ಕರೆಯಲಾಗಿದೆ.[2] ಪ್ರಸ್ತುತ ಈ ಗ್ರಾಮವನ್ನು ಹಲವರು ನುಗ್ಗಿಹಳ್ಳಿ ಎಂತಲೂ ಮತ್ತೆ ಕೆಲವರು ನುಗ್ಗೇಹಳ್ಳಿ ಎಂದು ಸಹ ಕರೆಯುತ್ತಾರೆ, ಹಲವು ಗ್ರಂಥಗಳಲ್ಲಿಯೂ ಈ ಗ್ರಾಮದ ಹೆಸರಿನ ವ್ಯತ್ಯಾಸಗಳನ್ನು ಸಹ ಕಾಣಬಹುದು. ಎಪಿಗ್ರಾಫಿಯ ಕರ್ನಾಟಿಕದಲ್ಲಿ ನುಗ್ಗೇಹಳ್ಳಿ ಎಂದು ಉಲ್ಲೇಖವಾಗಿರುವುದರಿಂದ ನಾನು ಸಹ ಈ ಗ್ರಾಮದ ಹೆಸರನ್ನು ನುಗ್ಗೇಹಳ್ಳಿ ಎಂದು ಬಳಸಿಕೊಂಡಿದ್ದೇನೆ. ಇಲ್ಲಿ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದ ತ್ರಿಕೂಟಚಲವಾದ ಲಕ್ಷ್ಮೀನರಸಿಂಹ, ಚಂದ್ರಮೌಳೇಶ್ವರ, ಸದಾಶಿವ ದೇವಾಲಯಗಳಿವೆ. ಇವಲ್ಲದೇ ನಂತರ ಕಾಲದಲ್ಲಿ ಕಟ್ಟಿ ಭಗ್ನವಾಗಿರುವ ಹಲವಾರು ದೇವಾಲಯದ ಭಗ್ನಾವಶೇಷಗಳಿವೆ. ಈ ಗ್ರಾಮಕ್ಕೆ ನಾಲ್ಕು ಕಡೆಯಲ್ಲಿ ಮುಖ್ಯದ್ವಾರಗಳನ್ನು ನಿರ್ಮಿಸಿರುವುದನ್ನು ಕಾಣಬಹುದು. ಪ್ರಸ್ತುತ ಎರಡು ಕಡೆಯಲ್ಲಿ ಮಾತ್ರ ಚೆನ್ನಾಗಿದ್ದು ಉಳಿದ ಕಡೆಯಲ್ಲಿ ಶಿಥಿಲವಾಗಿವೆ. ಇಲ್ಲಿ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದಂತಹ ಕೆರೆಗಳು ಸಹ ಇವೆ.

**ಲಕ್ಷ್ಮೀನರಸಿಂಹ ದೇವಾಲಯ** (ಚಿತ್ರ – 32, 33)

ಈ ದೇವಾಲಯವನ್ನು ಹೊಯ್ಸಳ ಸೋಮೇಶ್ವರನ ಆಳ್ವಕೆಯ ಕಾಲದಲ್ಲಿ ಅವನ ಸಂಧಿವಿಗ್ರಹಿಯಾದ ಬೊಮ್ಮಣ್ಣ ದಂಡನಾಯಕನು ಕ್ರಿ.ಶ. 1246ರಲ್ಲಿ[3] ಪ್ರಸನ್ನ ಕೇಶವ, ನರಸಿಂಹ ಮತ್ತು ಗೋಪಾಲ ದೇವರುಗಳನ್ನು ಪ್ರತಿಷ್ಠಾಪಿಸಿದನು. ಅಲ್ಲದೆ ನಿತ್ಯ ಕಾರ್ಯಗಳಿಗೆ ಹಲವಾರು ದಾನ ದತ್ತಿಗಳನ್ನು ನೀಡಿದನು. ಇಲ್ಲಿಯ ಮೂರು ಶಾಸನಗಳಲ್ಲಿ ದಂಡನಾಯಕನಾದ ಬೊಮ್ಮಣ್ಣನ ಉಲ್ಲೇಖವಿದೆ. ಅವುಗಳಲ್ಲಿ ಎರಡು ಶಾಸನಗಳನ್ನು ಬೊಮ್ಮಣ್ಣ ದಂಡನಾಯಕನೆ ಹಾಕಿಸಿದ್ದಾನೆ. ಈ ದೇವಾಲಯವನ್ನು ಟಿ. ನರಸಿಪುರ ತಾಲ್ಲೂಕಿನ ಸೋಮನಾಥಪುರದ ದೇವಾಲಯದ ನಿರ್ಮಾಣಕ್ಕಿಂತ 20 ವರ್ಷಗಳ ಹಿಂದೆಯೇ ನಿರ್ಮಿಸಲಾಗಿದೆ.[4] ವಿಜಯ ಸೋಮನಾಥಪುರವಾದ ನುಗ್ಗೇಹಳ್ಳಿಯಲ್ಲಿ ಬೊಮ್ಮಣ್ಣನ ಹಿರಿಯ ಅಕ್ಕ ಲಕ್ಷ್ಮಿ ಅಥವಾ ಲಕ್ಕವ್ವೆಯಕ್ಕಳು ನಾನಾ ಗೋತ್ರದ ಬ್ರಾಹ್ಮಣರಿಗಾಗಿ, ಪ್ರತಿದಿನ ಎಂಟು ಜನ ಬ್ರಾಹ್ಮಣರಿಗಾಗಿ ಛತ್ರವನ್ನು ಜನರ ಉಪಯೋಗಕ್ಕಾಗಿ

ದಾನವನ್ನು ನೀಡಿದರು.[5] ಕ್ರಿ.ಶ.1253ರ ಶಾಸನವನ್ನು ತಳಗಲ್‌ನ ವಿಷ್ಣುಭಟ್ಟನ ಮಗ ಕಮ್ಮಠ ಬಸವಣ್ಣನು ಹಾಕಿಸಿದ್ದಾನೆ.[6] ಇದರಲ್ಲಿಯೂ ಬ್ರಾಹ್ಮಣರಿಗಾಗಿ ಛತ್ರ ಮತ್ತು ಜನರ ಉಪಯೋಗಕ್ಕಾಗಿ ಬ್ರಹ್ಮಸಮುದ್ರ ಕೆರೆಯನ್ನು ಹತ್ತಿರದ ಗೊತ್ತಿಕೆರೆಯಲ್ಲಿ ಮಾಡಿಸಿದನು. ಈಗಲೂ ಈ ಕೆರೆಯು ಸದಾಶಿವ ದೇವಾಲಯದ ಪಕ್ಕದಲ್ಲಿದೆ. ಈ ದೇವಾಲಯದ ಮುಖ್ಯ ದೇವರಾಗಿ ಕೇಶವನಾದರೂ ಸಹ ಇದನ್ನು ಲಕ್ಷ್ಮೀನರಸಿಂಹ ದೇವಾಲಯ ಎಂದು ಸ್ಥಳೀಯರು ಕರೆಯುತ್ತಾರೆ.

ಕ್ರಿ.ಶ.1435ರ ಶಾಸನದಲ್ಲಿ ಉಲ್ಲೇಖಿತವಾಗಿರುವಂತೆ ವಿಜಯನಗರದ ರಾಜ ದೇವಾರಾಯನು ನುಗ್ಗೇಹಳ್ಳಿಯನ್ನು ಅವನ ಮಾಂಡಲೀಕನಾದ ಕಟ್ಟಿಗೆಯ ಗುಂಡಪ್ಪನಾಯಕನು ಆಳುತ್ತಿರುವಾಗ ಅವರ ಅಧಿಕಾರಿಯಾದ ಚಿಕ್ಕ ಭೀಮಣ್ಣನು ನರಸಿಂಹ ದೇವಾಲಯಕ್ಕೆ ಕೆಲವು ಪ್ರತಿಮೆಗಳನ್ನು ಮಾಡಿಸಿ ಕೊಟ್ಟನು. ಈ ಶಾಸನದಿಂದ ವಿಜಯನಗರದ ಕಾಲದಲ್ಲಿಯು ಸಹ ನುಗ್ಗೇಹಳ್ಳಿಯು ಒಂದು ಪ್ರಮುಖ ಅಗ್ರಹಾರವಾಗಿತ್ತು ಹಾಗು ರಾಜಕೀಯ ಚಟುವಟಿಕೆಯ ಕೇಂದ್ರವಾಗಿತ್ತು ಎಂದು ಹೇಳಬಹುದು.[7]

ದೇವಾಲಯವು ಪೂರ್ವಾಭಿಮುಖವಾಗಿದ್ದು ತ್ರಿಕೂಟಾಚಲವಾಗಿದೆ. ಇದನ್ನು ಸೋಪುಗಲ್ಲಿನಿಂದ ಕಟ್ಟಲಾಗಿದೆ. ಇದರ ವಾಸ್ತುವು ದ್ರಾವಿಡ ಶೈಲಿಯಲ್ಲಿದೆ. ಮೂಲ ದೇವಾಲಯವು ಸಂಪೂರ್ಣವಾಗಿ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿದ್ದು ಪಾತಾಳಂಕಣವು ಮಾತ್ರ ವಿಜಯನಗರ ಕಾಲದಲ್ಲಿ ನಿರ್ಮಾಣವಾಗಿದೆ. ದೇವಾಲಯದ ಹಲವು ಭಾಗಗಳನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಿದ್ದಾರೆ.

ತ್ರಿಕೂಟಾಚಲವಾದ ಈ ದೇವಾಲಯವು ಚತುರಸ್ರವಾದ ತಲವಿನ್ಯಾಸವನ್ನು ಹೊಂದಿದ್ದು ಸುಮಾರು 3 ಅಡಿ ಎತ್ತರದ ಜಗತಿಯನ್ನು ಹೊಂದಿದೆ. (ಚಿತ್ರ – 34) ಅಧಿಷ್ಠಾನದಲ್ಲಿ ಗಜ, ಹೂಬಳ್ಳಿ ಚಿತ್ರಗಳು, ತುರಗಗಳ ಸಾಲು ಈಗೆ ಹಲವಾರು ಶಿಲ್ಪಗಳನ್ನು ಹೊಂದಿದೆ. ದೇವಾಲಯವು ಮೂರು ಗರ್ಭಗೃಹ, ಒಂದು ಶುಕನಾಸಿ, ನವರಂಗ ಸಭಾಮಂಟಪ ಮತ್ತು ಮುಂಭಾಗದಲ್ಲಿ ಚಿಕ್ಕದಾದ ಮುಖಮಂಟಪ ಇದರ ಮುಂಭಾಗದಲ್ಲಿ ವಿಶಾಲವಾದ ಪಾತಾಳಂಕಣವನ್ನು ಹೊಂದಿದೆ. ದೇವಾಲಯದ ಸುತ್ತಲೂ ಪ್ರಾಕಾರವಿದ್ದು ಹೊಯ್ಸಳರ ಕಾಲದಲ್ಲಿಯೇ ನಿರ್ಮಾಣವಾಗಿರುವ ಮುಖ್ಯದ್ವಾರ ಮಂಟಪವನ್ನು ಹೊಂದಿದೆ. ದೇವಾಲಯದ ಸಂಪೂರ್ಣವಾಸ್ತು ಕೃತಿಯು ಹೊಯ್ಸಳರ ಕಾಲದಲ್ಲಿ ರಚನೆಯಾಗಿದ್ದರೂ ಸಹ ಅಲ್ಲಲ್ಲಿ ನಂತರದ ಕಾಲಘಟ್ಟದಲ್ಲಿ ಹಲವಾರು ಹೊಸ ಹೊಸ ಜೋಡಣೆಗಳಾಗಿರುವುದನ್ನು ಇಲ್ಲಿ ಕಾಣಬಹುದು. ಇದನ್ನು ಆಯಾ ಭಾಗಗಳನ್ನು ಉಲ್ಲೇಖಿಸುವಾಗ

ಅವುಗಳ ವಿವರಣೆಯನ್ನು ನೀಡುವಾಗ ಅವುಗಳ ಕಾಲಘಟ್ಟಗಳು ಮತ್ತು ಅವುಗಳ ಲಕ್ಷಣಗಳನ್ನು ವಿವರಿಸಿದ್ದೇನೆ.

**ಗರ್ಭಗುಡಿಗಳು**

ತ್ರಿಕೂಟಾಚಲ ದೇವಾಲಯವಾಗಿರುವುದರಿಂದ ಇಲ್ಲಿ ಮೂರು ಗರ್ಭಗೃಹಗಳಿವೆ. ಪಶ್ಚಿಮ ಭಾಗದ ಗರ್ಭಗುಡಿಯಲ್ಲಿ ಗರುಡ ಪೀಠದ ಮೇಲೆ ಸುಮಾರು 4.5 ಅಡಿ ಎತ್ತರದ ಕೇಶವ ಶಿಲ್ಪವಿದೆ. ಕೈಯಲ್ಲಿ ಶಂಖ, ಚಕ್ರ, ಗದ ಮತ್ತು ಪದ್ಮವನ್ನು ಹೊಂದಿದ್ದು ಮುಖಭಾವವು ಬಹಳ ಸೌಮ್ಯತೆಯಿಂದ ಕೂಡಿದೆ. ಆದುದರಿಂದಲೇ ಇದನ್ನು ಪ್ರಸನ್ನ ಕೇಶವ ಎಂದು ಸಹ ಕರೆಯುತ್ತಾರೆ. ಇದಕ್ಕೆ ಸುಂದರವಾದ ಪ್ರಭಾವಳಿಯಿದ್ದು ಇದರಲ್ಲಿ ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಕೆತ್ತಲಾಗಿದೆ. ಪ್ರಭಾವಳಿಯ ಇಕ್ಕೆಲಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯರನ್ನು ಚಿತ್ರಿಸಲಾಗಿದೆ. ಈ ಗರ್ಭಗೃಹದ ದ್ವಾರಬಂದವು ನಾಲ್ಕು ಶಾಖೆಗಳನ್ನು ಹೊಂದಿದೆ. ಮೊದಲಿನ ಎರಡು ಶಾಖೆಗಳು ನಿರಾಡಂಬರವಾಗಿವೆ. ಮಧ್ಯದ ಶಾಖೆಯು ಕಂಭ ಮಾದರಿಯಲ್ಲಿದೆ. ತೆಳುವಾದ ಹೊರಚಾಚಿದ ಅರೆಕಂಬದ ರೀತಿಯಲ್ಲಿದ್ದು ಹಲವಾರು ಹೊರ ಮತ್ತು ಒಳ ಚಾಚುಗಳನ್ನು ಹೊಂದಿವೆ. ಇವುಗಳ ಮೇಲ್ಭಾಗದಲ್ಲಿ ಬೋದಿಗೆ ಇದ್ದು. ಇದಕ್ಕೆ ಸಮಾನಾಂತರವಾಗಿ ಕೆಲವು ಹಂತಗಳಲ್ಲಿ ಮೊಗ್ಗು ಲಲಾಟ ಬಿಂಬದ ಎರಡೂ ಬದಿಯಲ್ಲಿ ಚಾಚಿಕೊಂಡಿವೆ. ಇವುಗಳ ಮೇಲೆ ಚಾಚು ಕಪೋತವಿದೆ. ಇದು ವಾಲಭಿ ಮತ್ತು ಲಲಾಟ ಪಟ್ಟಿಕೆಯನ್ನು ವಿಭಾಗಿಸುತ್ತದೆ. ಲಲಾಟ ಬಿಂಬದಲ್ಲಿ ಲಕ್ಷ್ಮೀನಾರಾಯಣನನ್ನು ಚಿತ್ರಿಸಲಾಗಿದ್ದು ಇದರ ಮೇಲ್ಭಾಗದ ತೋರಣದಲ್ಲಿ ಕೇಶವನನ್ನು ಚಿತ್ರಿಸಲಾಗಿದ್ದು ಎರಡು ಕಡೆಯಲ್ಲೂ ಅಲಂಕೃತ ವ್ಯಾಳಗಳನ್ನು ಚಿತ್ರಿಸಲಾಗಿದೆ.

**ಸುಖನಾಸಿ**

ಗರ್ಭಗೃಹದಷ್ಟೇ ವಿಶಾಲವಾದ ವಿಸ್ತೀರ್ಣವನ್ನು ಸುಖನಾಸಿಯು ಹೊಂದಿದೆ. ಇಲ್ಲಿಯ ಒಳಭಾಗದಲ್ಲಿ ಅಷ್ಟೇನೂ ಅಲಂಕರಣೆ ಕಂಡುಬರುವುದಿಲ್ಲ. ಭುವನೇಶ್ವರಿಯಲ್ಲಿ ಪದ್ಮ ಮಂಡಲ ವಿತಾನವಿದೆ ಅಲಂಕರಣೆಯಿದೆ. ದ್ವಾರಬಂಧವು ಪಂಚಶಾಖೆಯನ್ನು ಹೊಂದಿದೆ. ಒಂದರಲ್ಲಿ ಕಂಬದ ಕೆತ್ತನೆ ಇದೆ. ದ್ವಾರದ ಮೊದಲೆರಡು ಒಳಶಾಖೆಗಳನ್ನು ವೃತ್ತಾಕಾರದ ಬಳ್ಳಿ ಲತಾ ಸಾಲುಗಳಿಂದ ಅಲಂಕರಿಸಲಾಗಿದೆ. ಇಲ್ಲಿ ಕಪೋತದ ಕೆಳಗೆ ಮತ್ತೊಂದು ಪಟ್ಟಿಕೆಯನ್ನು ಸೇರಿಸಿದ್ದು ಅದು ಶಾಖೆಯ ಒಂದು ಭಾಗವಾಗಿದೆ. ಇದರ ಲಲಾಟಬಿಂಬದಲ್ಲಿ ಪೀಠದ ಮೇಲೆ ಕುಳಿತಿರುವ ಯೋಗೀಶ್ವರ ವಿಷ್ಣುವನ್ನು ಚಿತ್ರಿಸಲಾಗಿದೆ ಎಡಕಾಲನ್ನು ಮಡಚಿಕೊಂಡು ಬಲಕಾಲನ್ನು ಇಳಬಿಟ್ಟ ರೀತಿಯಲ್ಲಿ ಕುಳಿತಿದ್ದಾನೆ. ಎರಡು ಅಕ್ಕ ಪಕ್ಕದಲ್ಲಿ ಶ್ರೀದೇವಿ ಮತ್ತು ಭೂದೇವಿಯರನ್ನು ನಿಂತ

ಭಂಗಿಯಲ್ಲಿ ಚಿತ್ರಿಸಲಾಗಿದೆ. ಆದರೆ ಎಂ.ಎ.ಆರ್ ಸಂಪಾದಕರು ಇದನ್ನು ಲಕ್ಷ್ಮಿಯ ಶಿಲ್ಪವೆಂದು ಕರೆದಿದ್ದಾರೆ.[8] ಇಲ್ಲಿನ ಚಾಚು ಕಪೋತವು ಸ್ವಲ್ಪ ಹೆಚ್ಚಾಗಿ ಕುಸುರಿನ ಅಲಂಕಾರದಿಂದ ಕೂಡಿದೆ. ಕಪೋತದ ಮೇಲ್ಭಾಗದಲ್ಲಿ ಹತ್ತಿರ ಹತ್ತಿರವಾಗಿ ಚಿತ್ರಿಸಿರುವ ಕೂಡುಗಳವೆ. ವಾಲಭಿಯಲ್ಲಿ ದೇವತೆಗಳ ಶಿಲ್ಪಗಳನ್ನು ಚಿತ್ರಿಸುವ ಬದಲು ಕೀರ್ತಿಮುಖವನ್ನು ಚಿತ್ರಿಸಿದ್ದು ಈ ಶಿಲ್ಪದ ಎರಡು ಬದಿಯಲ್ಲೂ ನಿಂತ ಮಕರಗಳ ಅಲಂಕರಣ ಕಂಡುಬರುತ್ತದೆ. ಗರ್ಭಗೃಹ ಮತ್ತು ಸುಖನಾಸಿಯ ದ್ವಾರಬಂಧಗಳಲ್ಲಿ ವೈಷ್ಣವ ದ್ವಾರಪಾಲಕರನ್ನು ಚಿತ್ರಿಸಲಾಗಿದೆ. ಈ ಸುಖನಾಸಿಯಲ್ಲಿ ಸುಮಾರು 3 ಅಡಿ ಎತ್ತರದ ಕೇಶವ ದೇವರ ಲೋಹದ ಉತ್ಸವಮೂರ್ತಿಯನ್ನು ಇಟ್ಟಿದ್ದಾರೆ. ಕೇಶವನ ಪಕ್ಕದಲ್ಲಿ ಶ್ರೀದೇವಿ ಮತ್ತು ಭೂದೇವಿಯರ ಲೋಹದ ಮೂರ್ತಿಗಳನ್ನು ಸಹ ಇಲ್ಲಿ ಕಾಣಬಹುದು.

### ಉತ್ತರ ಭಾಗದ ಗರ್ಭಗೃಹ

ಉತ್ತರ ಭಾಗದ ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ಸುಖಾಶನದಲ್ಲಿ ಕುಳಿತಿರುವ ಲಕ್ಷ್ಮೀನರಸಿಂಹನ ಶಿಲ್ಪವಿದೆ, ಇದು ಸುಮಾರು ನಾಲ್ಕು ಅಡಿ ಎತ್ತರವಿದೆ. ನರಸಿಂಹನು ತೊಡೆಯ ಮೇಲೆ ಲಕ್ಷ್ಮಿಯನ್ನು ಕುಳ್ಳಿರಿಸಿಕೊಂಡಿದ್ದಾನೆ. ಇದಕ್ಕೆ ಸುಂದರವಾದ ಪ್ರಭಾವಳಿಯಿದ್ದು ಇದರಲ್ಲಿ ವಿಷ್ಣುವಿನ ದಶಾವತಾರದ ಚಿತ್ರವನ್ನು ಕೆತ್ತಲಾಗಿದೆ. ಈ ಶಿಲ್ಪವು ಹೊಸಹೊಳಲಿನ ದೇವಾಲಯದಲ್ಲಿರುವ ಲಕ್ಷ್ಮೀನರಸಿಂಹ ದೇವಾಲಯದ ರೀತಿಯಲ್ಲಿದೆ.[9] ದ್ವಾರಬಂದದಲ್ಲಿ ಐದು ಅಲಂಕರಣ ಪಟ್ಟಿಕೆಯಿದ್ದು ಇದರಲ್ಲಿಯೂ ಸಹ ಹೂಬಳ್ಳಿಗಳ ಅಲಂಕಾರ ಮಧ್ಯದಲ್ಲಿ ಲಂಬವಾದ ಕಂಬಗಳ ಚಾಚುಗಳು, ಕಪೋತಗಳು ಇಲ್ಲಿ ಕಂಡುಬರುತ್ತವೆ. ಇದರ ಲಲಾಟಬಿಂಬದಲ್ಲಿ ಲಕ್ಷ್ಮೀನರಸಿಂಹನ ಕುಳಿತ ಶಿಲ್ಪವಿದ್ದು ಅಕ್ಕ ಪಕ್ಕದಲ್ಲಿ ಪರಿಚಾರಕಿಯರ ಚಿತ್ರಗಳವೆ. ಮೇಲ್ಭಾಗದ ಮಕರತೋರಣದಲ್ಲಿ ಯೋಗನರಸಿಂಹನನ್ನು ಕುಳಿತ ಭಂಗಿಯಲ್ಲಿ ಕೆತ್ತಲಾಗಿದೆ, ಇದಕ್ಕೆ ಕೋಷ್ಠ ರೀತಿಯಲ್ಲಿ ಕಮಾನುಳ್ಳ ಮಂಟಪವನ್ನು ಚಿತ್ರಿಸಲಾಗಿದೆ. ಗೂಡಿನ ಅಕ್ಕ ಪಕ್ಕದಲ್ಲಿ ಮಕರಗಳ ಅಲಂಕರಣೆಯನ್ನು ಮಾಡಲಾಗಿದೆ. ಭುವನೇಶ್ವರಿಯಲ್ಲಿ ಪದ್ಮದ ರಚನೆಯಿದೆ. ದ್ವಾರದ ಎರಡು ಭಾಗದಲ್ಲೂ ವೈಷ್ಣವ ದ್ವಾರಪಾಲಕರ ಚಿತ್ರಗಳವೆ.

### ದಕ್ಷಿಣ ಭಾಗದ ಗರ್ಭಗೃಹ

ದಕ್ಷಿಣ ಭಾಗದ ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ಸುಮಾರು 4 ಅಡಿ ಎತ್ತರದ ವೇಣುಗೋಪಾಲನ ಶಿಲ್ಪವಿದೆ. ತ್ರಿಭಂಗಿಯಲ್ಲಿರುವ ಕೃಷ್ಣನು ಬಲಕ್ಕೆ ಕೊಳಲನ್ನು ಹಿಡಿದು ನಿಂತಿದ್ದಾನೆ. ಇದಕ್ಕೂ ಸುಂದರವಾದ ಪ್ರಭಾವಳಿಯಿದ್ದು ಇಲ್ಲಿ ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಚಿತ್ರಿಸಲಾಗಿದೆ. ಈ ಶಿಲ್ಪವು ಸೋಮನಾಥಪುರದ ದೇವಾಲಯದ ವೇಣುಗೋಪಾಲನ

ಲಕ್ಷಣಗಳನ್ನು ಹೊಂದಿದೆ. ಭುವನೇಶ್ವರಿಯಲ್ಲಿ ಪದ್ಮ ಮಂಡಲ ವಿತಾನವಿದೆ. ಲಲಾಟ ಬಿಂಬದಲ್ಲಿ ಅಮರನಾರಾಯಣನ ಶಿಲ್ಪವಿದೆ.[10] ನಾರಾಯಣನು ಕುಳಿತ ಭಂಗಿಯಲ್ಲಿದ್ದು ಆದಿಶೇಷನ ಮೇಲೆ ಕುಳಿತಿದ್ದು ಒಂದು ಕಾಲನ್ನು ಇಳಿಬಿಟ್ಟು ಮತ್ತೊಂದು ಕಾಲನ್ನು ಮಡಿಚಿ ಅದರ ಮೇಲೆ ಕೈಯನ್ನು ಹೊರಚಾಚಿಕೊಂಡಿದ್ದು ಸುಖಾಸನದ ರೀತಿಯಲ್ಲಿದ್ದಾನೆ. ಇವನನ್ನು ಆದಿಮೂರ್ತಿ, ಶೇಷಶಯನ ವಿಷ್ಣು ಎಂದು ಕರೆಯಬಹುದು. ದ್ವಾರ ಬಂದಗಳನ್ನು ಅಲಂಕರಣ ಪಟ್ಟಿಕೆಗಳಿಂದ ಚಿತ್ರಿಸಲಾಗಿದ್ದು ಐದು ಶಾಖೆಗಳನ್ನು ಕೆತ್ತಿದ್ದಾರೆ. ಇಲ್ಲಿ ಅರೆ ಕಂಬಗಳು, ಹೂಬಳ್ಳಿಗಳು ಇನ್ನೀತರ ಅಲಂಕರಣ ಪಟ್ಟಿಕೆಯನ್ನು ಮಾಡಲಾಗಿದೆ. ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರ ಚಿತ್ರಗಳಿವೆ.

ಈ ಮೂರು ಗರ್ಭಗೃಹಗಳು ಸಹ ಒಂದೇ ಅಳತೆಯ ವಿಸ್ತೀರ್ಣವನ್ನು ಹೊಂದಿದ್ದು ಸಾಮಾನ್ಯವಾಗಿ ಒಂದೇ ಲಕ್ಷಣವನ್ನು ಹೊಂದಿವೆ. ಎಲ್ಲವೂ ಸಹ ಚೌಕಕಾರವಾಗಿವೆ. ಆದರೆ ಮುಖ್ಯ ದೇವರಿರುವ ಗುಡಿಯ ಮುಂಭಾಗದಲ್ಲಿ ಅಂದರೆ ಕೇಶವ ದೇವರಿರುವ ಪಶ್ಚಿಮ ಗರ್ಭಗುಡಿಗೆ ಹೊಂದಿಕೊಂಡಂತೆ ಮಾತ್ರ ಸುಖನಾಸಿಯಿದ್ದು ಉಳಿದ ಉತ್ತರ ಮತ್ತು ದಕ್ಷಿಣ ಗರ್ಭಗೃಹಗಳಲ್ಲಿ ಶುಕನಾಸಿಯು ಇರುವುದಿಲ್ಲ. ಇವುಗಳು ನೇರವಾಗಿ ನವರಂಗಕ್ಕೆ ಹೊಂದಿಕೊಂಡಂತಿವೆ.

## ನವರಂಗ

ನವರಂಗದ ಬಲಭಾಗದಲ್ಲಿ ಸುಮಾರು 3 ಅಡಿ ಎತ್ತರದ ಗಣೇಶನ ಶಿಲ್ಪವಿದೆ. ಎಡಭಾಗದಲ್ಲಿಯೂ ಸಹ 3 ಅಡಿ ಎತ್ತರದ ಮಹಿಷಾಮರ್ಧಿನಿಯ ಶಿಲ್ಪವಿದೆ. ಮಧ್ಯಭಾಗದಲ್ಲಿ ಸ್ವತಂತ್ರವಾದ ನಾಲ್ಕು ಕಂಬಗಳಿವೆ. ಇವುಗಳು ಚೌಕಾಕಾರದ ಪೀಠ, ದುಂಡಾದ ಮೈಯುಳ್ಳ ಹಲವು ಬಳೆಗಳಿಂದ ರಚನೆಯಾಗಿವೆ, ಕುಂಭ, ಗಂಟೆಗಳ ಆಕೃತಿಯಲ್ಲಿ ಅಲಂಕರಣಗೊಂಡಿವೆ. ಈ ಕಂಭಗಳನ್ನು ತಿರುಗು ಯಂತ್ರದ ಮೇಲೆ ತಿರುಗಿಸಿ ದುಂಡಗೆ ಮಾಡಿದ್ದಾರೆ. ಕಂಭಗಳ ಮೇಲಿನ ಬೋದಿಗೆಗಳು ಸಹ ಅಲಂಕಾರಿಕವಾಗಿರುತ್ತವೆ. ದೇವಾಲಯದ ಪ್ರತಿ ಮೂಲೆಯಲ್ಲೂ ಸಹ ಭಿತ್ತಿಗೆ ಹೊಂದಿಕೊಂಡಂತೆ 32 ಅಂಚುಗಳುಳ್ಳ ಕೆಳಮುಖಬೋದಿಗೆಯ ಹದಿನಾಲ್ಕು ಕಂಭಗಳಿವೆ. ಇವುಗಳು ಹೊರ ಭಾಗದಲ್ಲಿ ಮಾತ್ರ ಅಲಂಕರಣೆಯನ್ನು ಹೊಂದಿದ್ದು ಒಳಭಾಗದಲ್ಲಿ ಅಂದರೆ ಭಿತ್ತಿಗೆ ಹೊಂದಿಕೊಂಡಂತೆ ಇರುವ ಭಾಗವು ಅಲಂಕರಣವನ್ನು ಹೊಂದಿರುವುದಿಲ್ಲ. ನವರಂಗದ ಮಧ್ಯದಲ್ಲಿ ಸುಮಾರು ಅರ್ಧ ಅಡಿ ಎತ್ತರದ ಚೌಕಾಕಾರದ ಡಯಾಸ್ ಅನ್ನು ರಚಿಸಿದ್ದಾರೆ.

ನವರಂಗದಲ್ಲಿರುವ ಎಲ್ಲಾ ಭುವನೇಶ್ವರಿಗಳು ಪದ್ಮಮಂಡಲವನ್ನು ಹೊಂದಿವೆ. ಕೆಲವು ಭುವನೇಶ್ವರಿಗಳು ಶಿಲ್ಪದ ಜೊತೆಯಲ್ಲಿಯೇ ಪದ್ಮಮಂಡಲದ ಅಲಂಕರಣವನ್ನು ಹೊಂದಿವೆ. ಪದ್ಮದಳಗಳನ್ನು ವೃತ್ತಾಕಾರದಲ್ಲಿ ಜೋಡಿಸಿದಂತೆ ಬಿಡಿಸಿರುವ ವಿತಾನವು "ಪದ್ಮಮಂಡಲ ವಿತಾನ"

ಎಂದು ಕರೆಯುವರು. ಪದ್ಮಮಂಡಲದ ಮಧ್ಯಭಾಗದಲ್ಲಿ ಇಳಿಬಿದ್ದಿರುವ ಕಮಲದ ಮೊಗ್ಗಿಗೆ "ಪದ್ಮಶಿಲಾ" ಎಂದು ಕರೆಯುತ್ತಾರೆ.[11] ಇಂತಹ ಭುವನೇಶ್ವರಿಗಳು ದೇವಾಲಯದ ಗರ್ಭಗೃಹದಲ್ಲಿ, ಶುಕನಾಸಿಯಲ್ಲಿ ಹಾಗೂ ನವರಂಗಗಳ ಎಲ್ಲಾ ಅಂಕಣಗಳಲ್ಲಿಯೂ ಕೂಡಾ ಭುವನೇಶ್ವರಿಯ ಅಲಂಕಾರವನ್ನು ನೋಡಬಹುದು. ಪ್ರಾಯಶಃ ಕಲಾವಿದನಿಗೆ ಭುವನೇಶ್ವರಿಯ ನಿರ್ಮಾಣದಲ್ಲಿ ಅತ್ಯಂತ ಪ್ರಭುತ್ವಬೇಕಾಗಿರುತ್ತದೆ. ತನ್ನ ಕೌಶಲ್ಯವನ್ನು ಭುವನೇಶ್ವರಿಯ ನಿರ್ಮಾಣದಲ್ಲಿ ತೋರಿಸುತ್ತಿದ್ದ ಉದಾಹರಣೆಗೆ ಮಲ್ಲಿತಮ್ಮ. ಇವುಗಳ ಕೆತ್ತನೆಯು ಕಲಾವಿದನ ಜಾಣ್ಮೆಗೆ ಮತ್ತು ಅವನಲ್ಲಿರುವ ಕಲಾಪ್ರಜ್ಞೆಗೆ ಸವಾಲಾದ ಕೆಲಸವಾಗಿದೆ. ಇದು ಕಲಾವಿದನಿಗೆ ತನ್ನ ಪ್ರೌಢಿಮೆಯನ್ನು ತೋರಿಸಲು ಒಂದು ಪ್ರಮುಖವಾದ ಕೆಲಸ ಎಂದೇ ಹೇಳಬಹುದು. ಇವುಗಳ ರಚನೆಯಲ್ಲಿ ಕೆಲವು ಮುಖ್ಯ ಸಂಗತಿಗಳನ್ನು ನಾವು ಗಮನಿಸಬಹುದು. ಭುವನೇಶ್ವರಿ ಅಲಂಕೃತವಾದಷ್ಟು ಕುಸುರಿನ ಕೆತ್ತನೆಗಳು ಇದ್ದಷ್ಟೂ ರಚನೆಯಲ್ಲಿ ತಾಂತ್ರಿಕ ಪರಿಣಿತಿಯನ್ನು ಓರೆಗೆ ಹಚ್ಚಬೇಕಾಗುತ್ತದೆ. ಬಿಡಿಶಿಲ್ಪದ ಹಾಗೆ ಇದನ್ನು ಒಂದೇ ಕಲ್ಲಿನಲ್ಲಿ ಮಾಡಲು ಆಗುವುದಿಲ್ಲ ಅದರ ವಿನ್ಯಾಸ ಹಾಗೂ ಅದರ ದಪ್ಪ ಒಳ ಅಳತೆಗಳಿಗೆ ಅನುಸಾರವಾಗಿ ಎಷ್ಟು ತುಂಡುಗಳು ಬೇಕೆಂಬುದನ್ನು ಮೊದಲೆ ತಿಳಿದುಕೊಂಡು ಏನನ್ನು ಕೆತ್ತಬೇಕೆನ್ನುವುದನ್ನು ಕೂಡಾ ಪೂರ್ವದಲ್ಲಿಯೇ ತೀರ್ಮಾನಿಸಿ ಆಯಾ ಕೆತ್ತನೆಯನ್ನು ಮಾಡಬೇಕಾಗುತ್ತದೆ. ಪ್ರತಿಯೊಂದು ತುಂಡುಕಲ್ಲುಗಳನ್ನು ಒಳವಿನ್ಯಾಸಕ್ಕೆ ತಕ್ಕಂತೆ ಮೊದಲೆ ಕೆತ್ತಿ ಆಕೃತಿಗಳನ್ನು ಪೂರ್ಣಗೊಳಿಸಿ ವ್ಯವಸ್ಥಿತವಾಗಿ ಜೋಡಿಸುವುದರಲ್ಲೂ ತಾಂತ್ರಿಕ ಪರಿಣಿತಿ ಅತ್ಯವಶ್ಯಕ. ಇವುಗಳನ್ನು ಒಂದಕ್ಕೊಂದು ಲಂಭವಾಗಿ ಅಥವಾ ಅಡ್ಡವಾಗಿ ಜೋಡಿಸಿದಾಗ ಜೋಡಣೆಗೊಂಡ ಸ್ಥಳದ ಗುರುತು ಸಿಗದೆ ಇರುವ ಹಾಗೆ ಕಲ್ಲು ತುಂಡುಗಳನ್ನು ಇದರಲ್ಲಿ ವಿನ್ಯಾಸಗೊಳಸಬೇಕಾಗುತ್ತದೆ. ಇಲ್ಲಿ ವಿವಿಧ ದೇವತೆಗಳು, ರಾಜ ರಾಣಿಯರ ಸಭೆ, ನರ್ತನ ಮಾಡುತ್ತಿರುವ ಸ್ತ್ರೀಯರು, ಅಷ್ಟದಿಕ್ಪಾಲಕರು ಅಲ್ಲದೇ ವೃತ್ತ, ವಜ್ರ, ಆಯತ, ನಕ್ಷತ್ರ ಇತ್ಯಾದಿ ರೂಪುಗಳನ್ನು ನೀಡಿರುತ್ತಾರೆ. ಅತ್ಯಂತ ಕುಸುರಿಯ ಕೆತ್ತನೆಯಿಂದ ಕೂಡಿದ ಭುವನೇಶ್ವರಿಗಳನ್ನು ಅಮೃತಾಪುರದ ಅಮೃತೇಶ್ವರ ಮತ್ತು ಬೇಲೂರಿನ ಕೇಶವ ದೇವಾಲಯದಲ್ಲಿ ನೋಡಬಹುದು. ಇದೆ ರೀತಿಯಲ್ಲಿ ಈ ದೇವಾಲಯದ ನವರಂಗ ಭುವನೇಶ್ವರಿಗಳಲ್ಲೂ ನೋಡಬಹುದು.

ನವರಂಗವು ಒಂಭತ್ತು ಅಂಕಣವಿದ್ದು ಮಧ್ಯದ ಅಂಕಣವು ತುಸು ವಿಶಾಲವಾಗಿದೆ. ಪ್ರತಿಯೊಂದು ಅಂಕಣವು ಸಹ ವಿವಿಧ ಮಾದರಿಯ ಭುವನೇಶ್ವರಿಯನ್ನು ಹೊಂದಿವೆ. ಮಧ್ಯದ ಭುವನೇಶ್ವರಿಯು ಕೆಳಭಾಗದಲ್ಲಿ ನಕ್ಷತ್ರಾಕಾರವಾಗಿದ್ದು ಮೇಲಿನ ಭಾಗವು ವೃತ್ತಾಕಾರವಾಗಿದೆ. (ಚಿತ್ರ – 45) ಮಧ್ಯದಲ್ಲಿ ಇಳಿಬಿಟ್ಟ ಕಮಲದ ಮೊಗ್ಗಿನ ಚಾಚು ಭಾಗವಿದ್ದು ತುದಿಯಲ್ಲಿ

ಚಪ್ಪಟೆಯಾಗಿದ್ದು ಇಲ್ಲಿ ಬ್ರಹ್ಮನ ಕುಳಿತ ಶಿಲ್ಪವಿದೆ. ಒಳ ಭಾಗ ಟೊಳ್ಳಾಗಿದ್ದು ಮಗುಚಿದ ಕಮಲದ ಹಾಗೆ ವೃತ್ತಾಕಾರವಾಗಿದೆ. ಒಳಭಾಗದ ಪಟ್ಟಿಕೆಯಲ್ಲಿ ಅಷ್ಟದಿಕ್ಪಾಲಕರ ಶಿಲ್ಪಗಳಿವೆ. ಇವರುಗಳು ಆಯಾ ದಿಕ್ಕಿಗೆ ಅನುಗುಣವಾಗಿ ತಮ್ಮ ವಾಹನದ ಮೇಲೆ ಕುಳಿತಿದ್ದಾರೆ. ಪೂರ್ವದಿಕ್ಕಿನಲ್ಲಿ ಐರಾವತದ ಮೇಲೆ ಇಂದ್ರ. ಆಗ್ನೇಯ ದಿಕ್ಕಿನಲ್ಲಿ ಮೇಷದ ಮೇಲೆ ಅಗ್ನಿ. ದಕ್ಷಿಣ ದಿಕ್ಕಿನಲ್ಲಿ ಮಹಿಷದ ಮೇಲೆ ಯಮ. ನೈರುತ್ಯ ದಿಕ್ಕಿನಲ್ಲಿ ಮನುಷ್ಯನ ಮೆಲೆ ನಿರರುತಿ. ಪಶ್ಚಿಮ ದಿಕ್ಕಿನಲ್ಲಿ ಮಕರದ ಮೇಲೆ ವರುಣ. ವಾಯುವ್ಯ ದಿಕ್ಕಿನಲ್ಲಿ ಸಾರಂಗದ ಮೇಲೆ ವಾಯು. ಉತ್ತರ ದಿಕ್ಕಿನಲ್ಲಿ ಅಶ್ವದ ಮೇಲೆ ಕುಬೇರ. ಈಶಾನ್ಯ ದಿಕ್ಕಿನಲ್ಲಿ ವೃಷಭದ ಮೇಲೆ ಶಿವನನ್ನು ಚಿತ್ರಿಸಲಾಗಿರುತ್ತದೆ.

ನವರಂಗ ಮುಖ್ಯದ್ವಾರದಿಂದ ಗಡಿಯಾರದ ಮುಳ್ಳು ತಿರುಗುವ ಹಾಗೆ ವಿವರಣೆಯನ್ನು ನೀಡಿದ್ದೇನೆ. (ಭುವನೇಶ್ವರಿ 2) ಮೊದಲನೆಯದು ನಕ್ಷತ್ರಾಕಾರದ ಒಳಚಾಚನ್ನು ಹೊಂದಿದೆ. ಹೊರಭಾಗದಲ್ಲಿ ಅಷ್ಟಮುಖಗಳನ್ನು ಹೊಂದಿದ್ದು. ಒಳಭಾಗವು ಟೊಳ್ಳಾದ ನಕ್ಷತ್ರಾಕಾರದ ಮಾದರಿಯಲ್ಲಿದೆ. (ಚಿತ್ರ – 46) ಮಧ್ಯದಲ್ಲಿ ಕೆಳಗೆ ಚಾಚಿಕೊಂಡಿರುವ ಮೊಗ್ಗಿನಿಂದ ಅರಳಿದ ಪುಷ್ಪದ ಭಾಗದ ರೀತಿಯಲ್ಲಿ ಚಿತ್ರಿಸಿದೆ. ನಂತರದ ಭುವನೇಶ್ವರಿಯು (ಭುವನೇಶ್ವರಿ 3) ಸಹ ಇದೇ ಲಕ್ಷಣಗಳನ್ನು ಹೊಂದಿದೆ. ಇದರ ಪಕ್ಕದ ಭುವನೇಶ್ವರಿಯಲ್ಲಿ (ಭುವನೇಶ್ವರಿ 4) ಪದ್ಮದ ಅಲಂಕರಣೆಯೊಂದಿಗೆ ಇಳಿಬಿಟ್ಟ ಮೊಗ್ಗಿನ ಅಲಂಕರಣೆಯೊಂದಿಗೆ ಶ್ರೀ ಚಕ್ರದ ಮಾದರಿಯಲ್ಲಿದೆ. ಇಲ್ಲಿ ನಿಯಮಿತ ಅಂತರದಲ್ಲಿ ಚಾಚುಗಳು ಕೂಡಾ ರಚನೆಯಾಗಿದೆ. (ಭುವನೇಶ್ವರಿ 5) ನಂತರದ ಭುವನೇಶ್ವರಿಯನ್ನು ಚೌಕಾಕಾರವಾಗಿ ಮಾಡಿದ್ದು ಒಂಭತ್ತು ಭಾಗಗಳನ್ನಾಗಿ ಮಾಡಿ ಅಲಂಕೃತವಾದ ಪಟ್ಟಿಕೆಯು ವಿಭಾಗಿಸುತ್ತದೆ. ಇದರ ಮಧ್ಯದಲ್ಲಿ ಯಕ್ಷನ ಶಿಲ್ಪವಿದ್ದು ಉಳಿದ ಎಲ್ಲಾ ಚೌಕಗಳಲ್ಲಿ ಆಯಾ ದಿಕ್ಕಿಗೆ ಅನುಗುಣವಾಗಿ ಅಷ್ಟದಿಕ್ಪಾಲಕರ ಉಬ್ಬುಶಿಲ್ಪಗಳಿವೆ.[12] ಇಲ್ಲಿರುವ ಶಿಲ್ಪಗಳು ಸ್ವಲ್ಪ ಅಸ್ಪಷ್ಟವಾಗಿ ಕಾಣುತ್ತವೆ. ನಂತರದ ಭುವನೇಶ್ವರಿಯು (ಭುವನೇಶ್ವರಿ 6) ಚೌಕಾಕಾರವಾಗಿದ್ದು ಒಳಭಾಗದಲ್ಲಿ ಪಟ್ಟಿಕೆಗಳು ಮತ್ತು ಮಧ್ಯದಲ್ಲಿ ಮೊಗ್ಗು ಕಂಡುಬರುತ್ತದೆ. (ಭುವನೇಶ್ವರಿ 7) ನಂತರದ ಭುವನೇಶ್ವರಿಯಲ್ಲಿ ನಕ್ಷತ್ರಾಕಾರವಾಗಿದು ಎಂಟನೆಯದು ವೃತ್ತಾಕಾರವಾಗಿದೆ. ಇಲ್ಲಿ ಪದ್ಮದ ಅಲಂಕರಣೆಯು ಗುಮ್ಮಟಾಕಾರವಾಗಿಯೂ ಟೊಳ್ಳಾಗಿದೆ. ಒಂಬತ್ತನೆಯ ಭುವನೇಶ್ವರಿಯು ಸಹ ಒಳಭಾಗದಲ್ಲಿ ವೃತ್ತಾಕಾರವಾಗಿದ್ದು ಕೆಳಭಾಗದಲ್ಲಿ ಅರ್ಧದ ವೃತ್ತಮಾದರಿಯ ಲಕ್ಷಣಗಳನ್ನು ಹೊಂದಿದೆ. ಈ ಎಲ್ಲಾ ಭುವನೇಶ್ವರಿಗಳ ಒಳ ಭಾಗದ ಮಾದರಿಯು ಒಂದೇ ತೆರನಾಗಿದ್ದು ಸ್ವಲ್ಪ ವಿಭಿನ್ನ ಮಾದರಿಯನ್ನು ಹೊಂದಿವೆ. ಇವುಗಳ ಅಲಂಕರಣೆಗೆ ಅಲ್ಲಲ್ಲಿ ಸಣ್ಣ ಸಣ್ಣ ಇಳಿಬಿಟ್ಟ ತಿರುಗುಣಿಯ ಗುಬುಟುಗಳು ಸಹ ಸುಂದರವಾಗಿ ಕಾಣಲು ಕಾರಣವಾಗಿವೆ. ಈ ರೀತಿಯ

ಕೆತ್ತನೆಗಳು ಹೊರಭಿತ್ತಿಯ ಶಿಲ್ಪಗಳಿರುವ ಮೇಲೆ ಸಣ್ಣದಾದ ಚಾಚು ಕಪೋತದ ಭಾಗಗಳಿದ್ದು ಇಲ್ಲಿಯು ಸಹ ಇವುಗಳನ್ನು ಚಿತ್ರಿಸಲಾಗಿರುತ್ತದೆ.

ನವರಂಗದಿಂದ ಸಭಾ ಮಂಟಪಕ್ಕೆ ಪ್ರವೇಶ ಕಲ್ಪಿಸುವ ದ್ವಾರವೂ ಕೂಡ ಅಲಂಕೃತಗೊಂಡಿದೆ. ಇದರಲ್ಲಿ ವೈವಿಧ್ಯಮಯವಾದ ಕಂಭಗಳ ಕೆತ್ತನೆ ಇದೆ. ಸರಳ ಚಾಚುಕಂಬದ ಜೊತೆಗೆ ಅರ್ಧವೃತ್ತಾಕಾರದ ವೈಷ್ಣವ ದ್ವಾರಪಾಲಕರ ಶಿಲ್ಪವನ್ನು ಚಿತ್ರಿಸಲಾಗಿದೆ. ಲಲಾಟ ಬಿಂಬದಲ್ಲಿ ವೀಣೆಯನ್ನು ಹಿಡಿದು ಕುಳಿತಿರುವ ಸರಸ್ವತಿಯ ಶಿಲ್ಪವಿದೆ. ಸಾಮಾನ್ಯವಾಗಿ ಈ ಜಾಗದಲ್ಲಿ ಗಜಲಕ್ಷ್ಮಿ ಮತ್ತು ದೇವಾಲಯಗಳ ಮುಖ್ಯ ದೇವರಿಗಿರುವ ಅವತಾರದ ಶಿಲ್ಪಗಳನ್ನು ಇಲ್ಲಿ ಕಾಣುತ್ತೇವೆ. ಆದರೆ ಇಲ್ಲಿ ಸರಸ್ವತಿಯ ಶಿಲ್ಪವನ್ನು ಕೆತ್ತಲಾಗಿದೆ. ಈ ರೀತಿಯ ಶಿಲ್ಪಗಳು ಲಲಾಟ ಬಿಂಬದಲ್ಲಿ ದೊರೆಯುವುದು ಸ್ವಲ್ಪ ವಿರಳವೆಂದೆ ಹೇಳಬಹುದು.

**ಸಭಾಮಂಟಪ**

ನವರಂಗದಿಂದ ಮುಂಭಾಗದಲ್ಲಿ ಸಭಾಮಂಟಪವಿದೆ. ಇಲ್ಲಿ ಮೊದಲು ಹೊಯ್ಸಳರ ಕಾಲದಲ್ಲಿ ನಿರ್ಮಿಸಲಾಗಿರುವ ನಾಲ್ಕು ಶ್ರೀಕರ ಮಾದರಿಯ ಕಂಭಗಳಿದ್ದು ಇವುಗಳು ಸಣ್ಣದಾದ ಮುಖಮಂಟಪವನ್ನು ರಚನೆ ಮಾಡಿರುವಂತಿವೆ. (ಚಿತ್ರ – 49) ಆದರೆ ನಂತರದ ಕಾಲದಲ್ಲಿ ಅಂದರೆ ವಿಜಯನಗರ[13] ಕಾಲದಲ್ಲಿ ಇದಕ್ಕೆ ಹೊಂದಿಕೊಂಡಂತೆ ನಾಲ್ಕು ಸ್ವತಂತ್ರ ಕಂಭಗಳಿರುವ ಒಂದು ಚಿಕ್ಕದಾದ ಸಭಾಮಂಟಪವನ್ನು ರಚಿಸಿದ್ದಾರೆ. ಇಲ್ಲಿರುವ ಕಂಭಗಳು ಗ್ರಾನೈಟ್ ಶಿಲೆಯಾಗಿದ್ದು ಚೌಕಾಕಾರವಾಗಿವೆ. ಪೂರ್ವ ಕಾಲದಲ್ಲಿ ಕಟ್ಟಲಾಗಿರುವ ಸಣ್ಣದಾದ ಮುಖಮಂಟಪಕ್ಕೆ ಹೊಂದಿಕೊಂಡಂತೆ ಇದನ್ನು ಸೇರಿಸಿ ಕಟ್ಟಲಾಗಿದೆ. ಇದರ ಮುಂಭಾಗದ ಭಿತ್ತಿಯಲ್ಲಿ ದೊಡ್ಡದಾದ ಜಾಲಂಧ್ರವನ್ನು ರಚಿಸಲಾಗಿದೆ.

**ಪಾತಾಳಂಕಣ**

ಸಭಾಮಂಟಪದ ಮುಂದೆ ಪಾತಾಳಂಕಣವಿದ್ದು ಇದು ಸುಮಾರು 5 ಅಡಿ ಎತ್ತರದ 3 ಅಡಿ ಅಗಲ 30 ಅಡಿ ಉದ್ದವಿದೆ. ಇಲ್ಲಿಯು ಸಹ ನಾಲ್ಕು ಸ್ವಂತತ್ರ ಕಂಭಗಳನ್ನು ನಿರ್ಮಿಸಲಾಗಿದೆ. ಇವುಗಳು ಸಹ ನಂತರದ ಕಾಲದ್ದವು. ಇದಕ್ಕೆ ಇತ್ತೀಚೆಗೆ ಕಟ್ಟಿರುವ ಸೋಪಾನವಿದೆ. ಸೋಪಾನದ ಎರಡು ಬದಿಯಲ್ಲೂ ಸೋಪುಗಲ್ಲಿನಿಂದ ಕೆತ್ತಿರುವ ಆನೆಗಳ ಶಿಲ್ಪಗಳನ್ನು ಇಟ್ಟಿದ್ದಾರೆ. ಇವುಗಳು ಹೊಯ್ಸಳರ ಕಾಲದವು ಮೂಲ ದೇವಾಲಯದ ವಾಸ್ತುವಿನ ಮುಂಭಾಗದಲ್ಲಿದ್ದ ಅಂದರೆ ಮುಖ್ಯದ್ವಾರದ ಬದಿಗಳಲ್ಲಿ ಇದ್ದಂತಹ ಶಿಲ್ಪಗಳನ್ನು ಇಲ್ಲಿಗೆ ತಂದು ಹಾಕಲಾಗಿದೆ. ಈ ಗಜಗಳ ಸೊಂಡಿಲ ಪಕ್ಕಗಳಲ್ಲಿ ಇಬ್ಬರು ಕುದುರೆ ಸವಾರರು ಓಡುತ್ತಿರುವಂತೆ ಚಿತ್ರಿಸಲಾಗಿದೆ.[14] ಇಲ್ಲಿ

ಸುಮಾರು 15 ಅಡಿ ಎತ್ತರದ ಹದಿನೆಂಟು ಮುಖದ ರಚನೆಯುಳ್ಳ ಕಂಭಗಳಿಂದ ರಚಿತವಾಗಿರುವ ಪಾತಾಳಂಕಣವಿದೆ. ಇಲ್ಲಿ ಹದಿನಾರು ಕಂಭಗಳಿವೆ. ಈ ಭಾಗವನ್ನು ಕ್ರಿ.ಶ.17ನೆಯ ಶತಮಾನದಲ್ಲಿ[15] ಕಟ್ಟಲಾಗಿದೆ. ಇದರ ಮಧ್ಯದಲ್ಲಿ ಸಣ್ಣದಾದ ಲೋಹದ ಮೇಲ್ಮೈಯನ್ನು ಹೊಂದಿರುವ ದೀಪಸ್ತಂಭವಿದೆ. ಬಲಭಾಗದಲ್ಲಿ ಸುಮಾರು 25 ಅಡಿ ಎತ್ತರವಿರುವ ಗರುಡ ಕಂಭವಿದೆ. ಇದರ ಸುತ್ತಲೂ ಭಗ್ನವಾದ ಸಣ್ಣದಾದ ಸೋಪುಗಲ್ಲಿನ ತುಂಡುಗಳನ್ನು ಹಾಕಿ ಪಿರಮಿಡ್ಡಿನಾಕಾರದಲ್ಲಿ ಪೀಠವನ್ನು ರಚಿಸಲಾಗಿದೆ. ಆದರೆ ಮೂಲ ಗರುಡ ಕಂಭಕ್ಕೆ ಪೀಠವಿರುವುದಿಲ್ಲ.

**ಮುಖ್ಯದ್ವಾರ**

ಸಾಮಾನ್ಯವಾಗಿ ದೇವಾಲಯಕ್ಕೆ ಮುಖ್ಯದ್ವಾರಗಳನ್ನು ನಿರ್ಮಿಸುವ ಪದ್ಧತಿ ಹೆಚ್ಚಿನ ಸಂಖ್ಯೆಯಲ್ಲಿ ವಿಜಯನಗರ ಕಾಲದಲ್ಲಿ ಕಾಣಬಹುದು. ಆದರೆ ಈ ದೇವಾಲಯದಲ್ಲಿ ಹೊಯ್ಸಳರ ಕಾಲದಲ್ಲಿಯೆ ಮುಖ್ಯದ್ವಾರವನ್ನು ಸೋಪುಗಲ್ಲಿನಿಂದ ಕಟ್ಟಲಾಗಿದೆ. ಇದೊಂದು ಹೊಯ್ಸಳರ ಕಾಲದಲ್ಲಿಯೆ ನಿರ್ಮಾಣವಾಗಿರುವುದು ಒಂದು ವಿಶೇಷತೆಯಾಗಿದೆ. ಇದು ವಿಶೇಷತೆಯೇ ಹೊರತು ಈ ರೀತಿಯಲ್ಲಿ ಮುಖ್ಯದ್ವಾರವನ್ನು ಹೊಯ್ಸಳರು ಮಾಡಿರುವುದು ಬಹಳ ವಿರಳ ಎನ್ನಬಹುದು. ಇದರಲ್ಲಿ ಯಾವುದೇ ಶಿಲ್ಪಗಳನ್ನು ಕೆತ್ತಲಾಗಿಲ್ಲ, ಇದಕ್ಕೆ ಹೊಂದಿಕೊಂಡಂತೆ ಇತ್ತೀಚೆಗೆ ಕಟ್ಟಿರುವ ಪ್ರಾಕಾರವಿದೆ. ಈ ದ್ವಾರವನ್ನು ಉಪ್ಪರಿಗೆ[16] ಎಂದು ಸಹ ಕರೆಯುತ್ತಾರೆ. ಈ ರೀತಿಯಲ್ಲಿ ಬೆಳವಾಡಿಯ ವೀರನಾರಾಯಣ ದೇವಾಲಯದಲ್ಲಿಯೂ ಸಹ ಕಾಣಬಹುದು ಆದರೆ ಬೆಳವಾಡಿಯಲ್ಲಿರುವ ಉಪ್ಪರಿಗೆ ಛಾವಣಿಯು ಹೆಂಚಿನ ಹೊದಿಕೆಯ ಮನೆಯಾಕಾರದಲ್ಲಿ ಇಳಿಜಾರಾಗಿದ್ದು ಎತ್ತರದಲ್ಲಿ ಮತ್ತು ವಿಸ್ತೀರ್ಣದಲ್ಲಿ ಇದಕ್ಕಿಂತ ವಿಸ್ತಾರವಾಗಿದೆ. ಅಲ್ಲಿ ಅರೆಕಂಭಗಳು ಹಾಗು ಪದ್ಮದ ಅಲಂಕರಣೆಗಳನ್ನು ಮಾಡಲಾಗಿದೆ. ಇಲ್ಲಿಯ ಮುಖ್ಯದ್ವಾರ ಮಂಟಪವು ಅಷ್ಟೇನು ಅಲಂಕೃತವಾಗಿಲ್ಲ. ಇದರ ಮೇಲ್ಭಾಗದಲ್ಲಿ ಇತ್ತೀಚೆಗೆ ಗಾರೆಯಿಂದ ಕೋಷ್ಠಗಳನ್ನು ನಿರ್ಮಿಸಿರುವ ಗಾರೆಶಿಲ್ಪಗಳನ್ನು ಮಾಡಿದ್ದಾರೆ.

**ಅಧಿಷ್ಠಾನ**

ದೇವಾಲಯದ ಅಧಿಷ್ಠಾನವು ಅಲಂಕಾರಿಕವಾದಂತಹ ಶಿಲ್ಪಗಳನ್ನು ಹೊಂದಿದೆ. (ಚಿತ್ರ – 35) ಇದು ಬೇಲೂರು, ಹಳೇಬೀಡು ಮತ್ತು ಸೋಮನಾಥಪುರ ದೇವಾಲಯಗಳ ಅಧಿಷ್ಠಾನದ ರೀತಿಯಲ್ಲಿಯೇ ಚಿತ್ರಿಸಲಾಗಿದೆ. ಇಲ್ಲಿನ ಪ್ರತಿಯೊಂದು ಶಿಲ್ಪ ಪಟ್ಟಿಕೆಯು ಸುಮಾರು ಅರ್ಧ ಅಡಿ ಎತ್ತರವಿದ್ದು ದೇವಾಲಯದ ಸುತ್ತಲೂ ಕಂಡುಬರುತ್ತದೆ.

ಕೆಳಸಾಲಿನಲ್ಲಿ ಗಜಗಳನ್ನು ಚಿತ್ರಿಸಲಾಗಿದೆ. ಇವುಗಳನ್ನು ದೇವಾಲಯದ ಭಾರವಾಹಕಗಳಂತೆ ಸಾಂಕೇತಿಕವಾಗಿ ಬಳಸಲಾಗಿದೆ. ಇವುಗಳನ್ನು ಒಂದೇ ಸಾಲಿನಲ್ಲಿ ಒಂದರ ಹಿಂದೆ ಮತ್ತೊಂದರಂತೆ ಸಾಗುತ್ತಿರುವಂತೆ ಬಿಗಿಯಾದ ಸಂಯೋಜನೆಯಲ್ಲಿ ಸಾಲಾಗಿ ಚಿತ್ರಿಸಲಾಗಿದೆ. ಪ್ರತಿಯೊಂದು ಆನೆಯು ಮುಂಚಲನಾ ಭಂಗಿಯಲ್ಲಿದೆ. ಅಲ್ಲಲ್ಲಿ ಒಂದಕ್ಕೊಂದು ನಿಲ್ಲಲು ಸ್ಥಳಾವಕಾಶವೇ ಇಲ್ಲದಂತೆ ತುಂಬಾ ಹತ್ತಿರ ಹತ್ತಿರವಾಗಿ ಒಂದರ ಪಕ್ಕದಲ್ಲಿ ಮತ್ತೊಂದು ಇರುವಂತೆ ಕೆತ್ತಿದ್ದಾರೆ. ಇವುಗಳಿಗೆ ಅಲಂಕಾರವನ್ನು ಮಾಡಿರುವಂತೆ ತೋರಿಸಲಾಗಿದೆ, ಬೆನ್ನ ಮೇಲೆ ಅಲಂಕಾರಿಕ ಬಟ್ಟೆಗಳನ್ನು ಹಾಕಲಾಗಿದೆ. ಇದಕ್ಕೆ ಇಳಿಬಿಟ್ಟಿರುವ ಹೂಗುಚ್ಚಗಳದ್ದು ಕೊರಳಲ್ಲಿ ಗಂಟೆಗಳ ಮಾಲೆಯನ್ನು ಹಾಕಲಾಗಿದೆ. ಇಲ್ಲಿ ಅಲಂಕರಣದ ಜೊತೆಗೆ ಪೋಷಾಕುಗಳನ್ನು ಹಾಕಿದ್ದಾರೆ. ಇದು ಯುದ್ಧದ ಸಮಯದಲ್ಲಿ ರಕ್ಷಣೆ ಒದಗಿಸಲು ಹಾಕಿದ ಯದ್ಧ ಪೋಷಾಕಿನ ರೀತಿ ಕಂಡುಬಂದರೂ ಸಹ ಹಲವಾರು ಚಿತ್ರಗಳಿಂದ ಅಲಂಕಾರಿಕವಾಗಿರುತ್ತದೆ. ಆದರೆ ಎಲ್ಲಾ ಆನೆಗಳಲ್ಲೂ ಪೋಷಾಕುಗಳು ಇರುವುದಿಲ್ಲ. ಭಿತ್ತಿಯ ಮೂಲೆ ಭಾಗಗಳಲ್ಲಿ ಎರಡು ದಿಕ್ಕಿಗೂ ಅನುಗುಣವಾಗಿರುವಂತೆ ಎರಡು ದೇಹ ಒಂದು ತಲೆ ಇರುವಂತೆಯೂ ಚಿತ್ರಿಸಲಾಗಿದೆ. ಈ ರೀತಿಯಲ್ಲಿ ಮೂಲೆಯಲ್ಲಿರುವ ಆನೆಯನ್ನು ವಿಭಿನ್ನವಾಗಿ ತೋರಿಸಲು ಶಿಲ್ಪಿಯು ಒಂದೇ ತಲೆಗೆ ಎರಡು ದೇಹಗಳನ್ನು ಸರಿಹೊಂದಿಸಿ ತೋರಿಸಿದ್ದಾನೆ. ಆನೆಗಳ ಜೊತೆಗೆ ಮಾವುತರು ಹಾಗೂ ಯೋಧರನ್ನು ಚಿತ್ರಿಸಲಾಗಿದೆ. ಇವರನ್ನೂ ಸಹ ಆಕರ್ಷಕವಾಗಿ ತೋರಿಸಿದ್ದಾರೆ.

ಎರಡನೆ ಸಾಲು ಅಶ್ವಗಳ ಸಾಲು. ಇದು ಸಹ ಗಜಗಳ ಸಾಲಿನಂತೆಯೆ ವೈವಿದ್ಯಮಯ ಲಕ್ಷಣಗಳನ್ನು ಹೊಂದಿದೆ. ಇವುಗಳು ಒಂದರ ಹಿಂದೆ ಮತ್ತೊಂದು ಅದರ ಹಿಂದೆ ಮಗದೊಂದು ಮುನ್ನುಗ್ಗುತ್ತಿರುವ ರೀತಿಯಲ್ಲಿಯೂ ಹಾಗೂ ವಿರುದ್ಧ ದಿಕ್ಕಿನಲ್ಲಿಯೂ ಚಲಿಸುವಂತೆ ಕೆತ್ತಲಾಗಿದೆ. ಇವುಗಳು ಮುಂದಿನ ಎರಡು ಕಾಲುಗಳನ್ನು ಮೇಲಕ್ಕೆತ್ತಿ ಜಿಗಿದು ಓಡುತ್ತಿರುವಂತೆಯೂ ಚಿತ್ರಿಸಲಾಗಿದೆ. ಯುದ್ಧಕ್ಕೆ ಹೊರಟಿರುವ ದೃಶ್ಯ ಹಾಗು ಯೋಧರು ಮತ್ತು ಸವಾರರನ್ನು ಚಿತ್ರಿಸಲಾಗಿದೆ. ಗಜಗಳಿಗೆ ಹಾಕಿರುವ ಯುದ್ಧ ಪೋಷಾಕುಗಳನ್ನು ಇಲ್ಲಿಯೂ ಹಾಕಲಾಗಿದ್ದು ಇವು ಯುದ್ಧದ ಸಮಯದಲ್ಲಿ ಕುದುರೆಗಳ ರಕ್ಷಣೆಗೆಂದು ಹಾಕಲಾಗಿದೆ. ಇವುಗಳನ್ನು ಸಹ ಸೂಕ್ಷ್ಮ ಕೆತ್ತನೆ ಕುಸುರಿಯಿಂದ ಅಲಂಕರಿಸಲಾಗಿದೆ. ಆದರೆ ಈ ರೀತಿಯ ಶಿಲ್ಪಗಳು ಬಹಳ ಕಡಿಮೆ. ಅಶ್ವಗಳ ಮಧ್ಯದಲ್ಲಿ ಸೈನಿಕರು, ಗುರಾಣಿ ಮತ್ತು ಭರ್ಜಿಗಳನ್ನು ಹಿಡಿದು ಸಾಗುತ್ತಿರುವ ಚಿತ್ರಗಳಿವೆ. ಈ ಸಾಲಿನಲ್ಲಿಯೆ ಹಲವಾರು ಒಂಟೆಗಳನ್ನು ಕೆತ್ತಿದ್ದಾರೆ. ಇವುಗಳು ಸಹ ಅಶ್ವಗಳಷ್ಟೆ ಮುನ್ನುಗ್ಗುತ್ತಿರುವಂತೆಯು ಹಾಗು ಇವುಗಳಷ್ಟೇ ಎತ್ತರವಾಗಿ ಆಕೃತಿಯ ಎತ್ತರಕ್ಕೆ ಸಮನಾಗಿ

ಕೆತ್ತಲಾಗಿದೆ. ಒಂಟೆಗಳು ಯುದ್ಧದಲ್ಲಿ ಸೈನಿಕರಿಗೆ ಹುರಿದುಂಬಿಸಲು ಇರುವ ಮದ್ದಲೆಗಳು ಹಾಗೂ ಯುದ್ಧಕ್ಕೆ ಬೇಕಾದ ಇನ್ನಿತರ ಸಲಕರಣೆಗಳನ್ನು, ಆಯುಧಗಳನ್ನು ಹಾಗೂ ಆಹಾರಗಳನ್ನು ಒತ್ತುಕೊಂಡು ಹೋಗಲು ಉಪಯೋಗಿಸುತ್ತಿದ್ದರು. ಕೆಲವು ಒಂಟೆಗಳು ಯುದ್ದದಲ್ಲಿ ಭಾಗಿಯಾಗಿರುವಂತೆಯೂ ಚಿತ್ರಿಸಲಾಗಿದೆ. ಮೇಲ್ಭಾಗದಲ್ಲಿ ಯೋಧನು ಭರ್ಚಿ ಮತ್ತು ಗುರಾಣಿಯನ್ನು ಹಿಡಿದುಕೊಂಡು ಕುಳಿತಿರುವಂತೆಯು ಚಿತ್ರಿಸಲಾಗಿದೆ. ಆದರೆ ಒಂಟೆಗಳು ಅಶ್ವಗಳಷ್ಟು ಹೆಚ್ಚಿನ ಸಂಖ್ಯೆಯ ಶಿಲ್ಪಗಳು ಇಲ್ಲಿ ಕಂಡುಬರುವುದಿಲ್ಲ ಕೇವಲ ಬೆರಳೆಣಿಕೆಯಷ್ಟು ಒಂಟೆಗಳು ಮಾತ್ರ ಇಲ್ಲಿ ಕಂಡುಬರುತ್ತವೆ. ಯುದ್ಧದಲ್ಲಿ ಹಾಗೂ ದೈನಂದಿನ ಸಾಗಾಣಿಕೆಯಲ್ಲಿ ಭಾಗವಹಿಸುತ್ತಿದ್ದ ಇತರ ಪ್ರಾಣಿಗಳಷ್ಟೆ ಒಂಟೆಗಳು ಸಹ ಭಾಗವಹಿಸಿರುವುದು ಸ್ಪಷ್ಟವಾಗುತ್ತದೆ.

ಮೂರನೇಯ ಸಾಲಿನಲ್ಲಿ ಲತಾಪಟ್ಟಿಕೆಯನ್ನು ಚಿತ್ರಿಸಲಾಗಿದೆ. ಇಲ್ಲಿ ಸುರುಳಿಯಾಕಾರದ ಹೂಬಳ್ಳಿಗಳನ್ನು ಬಿಡಿಸಿದ ಪುಷ್ಪಗಳಿವೆ. ಅದರಲ್ಲಿನ ಎಲೆಗಳನ್ನು ಸಹ ಚಿತ್ರಿಸಲಾಗಿದೆ. ಈ ಸಾಲಿನ ಪ್ರತಿಯೊಂದು ಮೂಲೆಯಲ್ಲೂ ಕೀರ್ತಿಮುಖದ ರಚನೆಯಿದೆ. ಈ ರೀತಿಯ ಅಲಂಕಾರಿಕ ಸುರುಳಿಯಾಕಾರದ ಹೂಬಳ್ಳಿಗಳ ಮಧ್ಯದಲ್ಲಿ ಹಂಸ, ಮಕರ, ಕೋತಿಗಳು, ಹಾಗೂ ಇನ್ನಿತರ ಶಿಲ್ಪಗಳನ್ನು ಕೆತ್ತಿದ್ದಾನೆ ಅಲ್ಲಲ್ಲಿ ಹಣ್ಣು ಕಾಯಿಗಳನ್ನು ತಿನ್ನುತ್ತಿರುವ ಪ್ರಾಣಿ ಪಕ್ಷಿಗಳನ್ನು ವಿವಿಧ ಭಂಗಿಯಲ್ಲಿರುವಂತೆ ತೋರಿಸಲಾಗಿದೆ.

ನಾಲ್ಕನೇಯ ಸಾಲಿನಲ್ಲಿ ಕಥಾನಕ ಶಿಲ್ಪಗಳನ್ನು ಚಿತ್ರಿಸಿದ್ದಾನೆ. ಇಲ್ಲಿ ಭಾಗವತ ಕಥೆಗಳನ್ನು ಹೇಳುವುದಾಗಿದೆ. ಕಥಾನಕ ವಸ್ತುಗಳನ್ನು ದೃಶ್ಯರೂಪದಲ್ಲಿ ಕೆತ್ತುವ ಪರಿಪಾಠ ಭಾರತೀಯ ಕಲೆಯಲ್ಲಿ ಬಹು ಪ್ರಾಚೀನ ಕಾಲದಿಂದಲೂ ಬಂದಂತಹ ಕಲೆಯಾಗಿದೆ. ಇದನ್ನು ಬೌದ್ಧ ಸ್ತೂಪಗಳಲ್ಲಿಯೂ ಕಾಣಬಹುದು.[17] ಇದೇ ರೀತಿಯಲ್ಲಿ ಹಿಂದು ದೇವಾಲಯಗಳಲ್ಲಿಯೂ ಸಹ ಕಂಡುಬಂದಿದ್ದು, ಇದು ಗುಪ್ತರ ಕಾಲದಲ್ಲಿಯೆ ಪ್ರಾರಂಭವಾಯಿತು. ಕರ್ನಾಟಕದಲ್ಲಿ ಮೊಟ್ಟ ಮೊದಲ ಬಾರಿಗೆ ಚಾಲುಕ್ಯರ ಕಾಲದಲ್ಲಿ ಪೌರಾಣಿಕ ಕಥೆಗಳನ್ನು ದೃಶ್ಯರೂಪದಲ್ಲಿ ಕೆತ್ತಿದ್ದಾರೆ. ನಂತರದಲ್ಲಿ ಹೊಯ್ಸಳರು ಸಹ ಇದನ್ನೆ ಅನುಸರಿಸಿದರು. ಈ ದೇವಾಲಯದ ಅಧಿಷ್ಠಾನದಲ್ಲಿ ನಾಲ್ಕನೆಯ ಪಟ್ಟಿಕೆಯಲ್ಲಿ ಭಾಗವತದ ಕಥೆಯ ನಿರೂಪಣೆಯು ಇಲ್ಲಿ ಒಂದರ ನಂತರ ಮತ್ತೊಂದರಂತೆ, ಅಂದರೆ ಕೃಷ್ಣನ ಜನ್ಮದಿಂದ ಹಿಡಿದು ಕಂಸನನ್ನು ಕೊಲ್ಲುವವರೆಗೆ ಅನುಕ್ರಮವಾದ ಎಲ್ಲ ಘಟನಾವಳಿಗಳನ್ನು ಚಿತ್ರಿಸಲಾಗಿಲ್ಲ. ಮಧ್ಯೆ ಮಧ್ಯೆ ಹಲವಾರು ಕಥೆಗಳನ್ನು ನಿರೂಪಿಸುವ ಶಿಲ್ಪಗಳನ್ನು ಬಿಟ್ಟಿದ್ದರೂ ಸಹ ಕೆತ್ತಿರುವ ಶಿಲ್ಪಗಳಿಂದಲೆ ಸಂಪೂರ್ಣವಾದ ಕಥೆಯನ್ನು ತಿಳಿಯಬಹುದು.

ಉತ್ತರ ಗರ್ಭಗುಡಿಯಿಂದ ಭಾಗವತದ ಕಥೆಯು ಆರಂಭವಾಗಿದೆ. ಶಕಟ ಗೋಪರು ಕೃಷ್ಣನಿಗೆ ಬೆಣ್ಣೆ ಮೊಸರು ಕೊಡುವುದು. ಇಲ್ಲಿ ಚಕ್ಕಡಿಯಲ್ಲಿ ಕುಳಿತ ಕೆಲವರು. ಮುಂಭಾಗದಲ್ಲಿ. ಹೆಗಲ ಮೇಲೆ ತಕ್ಕಡಿಯ ರೀತಿಯಲ್ಲಿರುವಂತೆ ಎರಡು ಕಡೆಯು ಹಾಲು. ಬೆಣ್ಣೆ ತುಂಬಿರುವ ಪಾತ್ರೆಗಳನ್ನು ಚಿತ್ರಿಸಲಾಗಿದೆ. ಇಲ್ಲಿ ಮರ ಗಿಡಗಳನ್ನು ತೋರಿಸುತ್ತಾ ಇದು ಗೋಕುಲದ ವಾಸ್ತವಿಕತೆಯನ್ನು ತಿಳಿಸುತ್ತದೆ. ಎರಡನೆಯದು ಕೃಷ್ಣನು ಬಾಯ್ತೆರದು ತನ್ನ ತಾಯಿಯಾದ ಯಶೋಧರೆಗೆ ಬೆಣ್ಣೆಯನ್ನು ತಿಂದಿಲ್ಲ ಎಂದು ಬಾಯಿಯನ್ನು ತೆರೆದು ತೋರಿಸುತ್ತಿರುವುದು. ಇದು ಬಾಯಿಯಲ್ಲಿ ವಿಶ್ವವನ್ನು ತೋರಿಸುವ ಕಲ್ಪನೆಯು ಆಗಿದೆ. ನಂತರದಲ್ಲಿ ಯಶೋಧೆಯು ಕೃಷ್ಣನನ್ನು ದಂಡಿಸುವುದು, ಇಲ್ಲಿ ಕೃಷ್ಣನ ಬಾಲಚೇಷ್ಟೆಯಿಂದ ಕೋಪಗೊಂಡು ಬಾಲಕೃಷ್ಣನನ್ನು ದಂಡಿಸುತ್ತಿರುವುದು. ಕೈಯಲ್ಲಿ ಉದ್ದನೆಯ ಖಡ್ಗ ಮತ್ತು ಡಾಲುಗಳನ್ನು ಹಿಡಿದುಕೊಂಡಿದ್ದರೆ. ಬಹುಶಃ ಇದು ಕಂಸನು ದೇವಕಿಯ ಮಕ್ಕಳನ್ನು ಕೊಲ್ಲಿಸುವ ದೃಷ್ಟಿಯಿಂದ ಅವರನ್ನು ಹುಡುಕಿಸಲು ತನ್ನ ಸೈನಿಕರನ್ನು ಕಳುಹಿಸಿರಬಹುದಾದಂತಹ ಶಿಲ್ಪ. ಗೋಪರು ಇಂದ್ರ ಮತ್ತು ದಿಕ್ಪಾಲಕರೊಡನೆ ಯುದ್ಧ ಮಾಡುತ್ತಿರುವುದು. ಇದರ ಮುಂದುವರೆದ ಭಾಗವಾಗಿಯೇ ಗೋಪಾಲಕರು ದೇವತೆಗಳೊಡನೆ ಹೋರಾಡುವ ದೃಶ್ಯವಿದೆ. ಇಲ್ಲಿ ಇಂದ್ರನನ್ನು ತೋರಿಸಲಾಗಿದೆ. ಇವನ ಹಿಂದೆ ಅಷ್ಟದಿಕ್ಪಾಲಕರು ಒಬ್ಬರ ಹಿಂದೆ ಮತ್ತೊಬ್ಬರಂತೆ ನಿಂತಿದ್ದಾರೆ. ಇವರ ವಿರುದ್ಧ ದಿಕ್ಕಿನಲ್ಲಿ ಬಾಲ ಕೃಷ್ಣ ಮತ್ತು ಗೋಪಾಲಕರನ್ನು ಚಿತ್ರಿಸಲಾಗಿದೆ. ನಂತರದಲ್ಲಿ ಕೃಷ್ಣನ ಬಾಲ್ಯದಲ್ಲಿ ನಡೆದ ಘಟನೆಗಳನ್ನು ಆಧರಿಸಿದ ಚಿತ್ರಗಳಿವೆ. ಇವುಗಳಲ್ಲಿ ಬಾಲ ಕೃಷ್ಣನಿಗೆ ರಾಜನಂತೆ ಅಲಂಕರಿಸಲ್ಪಟ್ಟ ವ್ಯಕ್ತಿಯೊಬ್ಬ ನಮಸ್ಕರಿಸುತ್ತಿರುವುದು. ತೊಟ್ಟಿಲಿನಲ್ಲಿ ಮಲಗಿರುವ ಕೃಷ್ಣ, ಪೂತನಿ ಸಂಹಾರ, ಇಲ್ಲಿ ಕೃಷ್ಣನನ್ನು ತೊಟ್ಟಿಲಿನಲ್ಲಿರುವಂತೆ ಪಕ್ಕದಲ್ಲಿ ದೈತ್ಯಾಕಾರದ ರಾಕ್ಷಸಿಯು ನಿಂತಿರುವಂತೆಯೂ ನಂತರದಲ್ಲಿ ರಾಕ್ಷಸಿಯು ದೊಡ್ಡದಾದ ಆಕಾರದಲ್ಲಿ ಬಿದ್ದಿರುವುದು ಕೃಷ್ಣನು ಅವಳ ಮೇಲೆ ನಿಂತುಕೊಂಡು ಅವಳನ್ನು ಕೊಲ್ಲುವುದು. ಇದು ಪೂತನಿಯು ವಿಷಪೂರಿತ ಸ್ಥನ ಪಾನ ಮಾಡಿ ಕೃಷ್ಣನನ್ನು ಕೊಲ್ಲಲು ಹೋಗಿ ತಾನೆ ಬಲಿಯಾದ ಘಟನೆಯನ್ನು ವಿವರಿಸುತ್ತದೆ. ಶಕಟಾಸುರಭಂಜನದ ಕಥೆಯ ಶಿಲ್ಪದಲ್ಲಿ ರಾಕ್ಷಸ ಶಕಟನನ್ನು ಕೃಷ್ಣ ತನ್ನ ಕಾಲಿನಿಂದ ಮೇಲಕ್ಕೆ ಒದೆದು ಕೊಂದಿರುವ ಚಿತ್ರವಿದೆ. ನಂತರದಲ್ಲಿ ಯಮಳಾರ್ಜುನ ವೃಕ್ಷ ರಾಕ್ಷಸರ ಹರಣ. ಈ ವೃಕ್ಷರಾಕ್ಷಸರು ಗೋಕುಲದ ಜನರಿಗೆಲ್ಲ ತೊಂದರೆ ಕೊಡುತ್ತಿದ್ದರು. ಇವೆಲ್ಲವು ಬಾಲಕೃಷ್ಣನು ದುಷ್ಟ ಸಂಹಾರ ಕಾರ್ಯಗಳನ್ನು ಮಾಡದನು ಎಂದು ತಿಳಿಸುತ್ತದೆ.

ಕೃಷ್ಣನು ತನ್ನ ಬಾಲ್ಯದಲ್ಲಿ ತುಂಟಾಟ ಮಾಡುವುದನ್ನು ಸಹಿಸದ ತಾಯಿ ಅವನನ್ನು ಮರಕ್ಕೆ ಕಟ್ಟಿ ಹಾಕಿ ಹೊಡೆಯುವ ದೃಶ್ಯಗಳಿವೆ. ಬೆಣ್ಣೆಯನ್ನು ಕದ್ದು ತಿನ್ನುವುದೆಂದರೆ ಈತನಿಗೆ ಬಹಳ ಇಷ್ಟವಾದ ಕಾಯಕ. ಇದರಿಂದ ಬೇಸತ್ತ ತಾಯಿ ದಂಡಿಸುತ್ತಿದ್ದಳು. ಇಂತಹ ಘಟನೆಗಳನ್ನು ಆಧರಿಸಿ ಮಜ್ಜಿಗೆ ಕಡೆಯುತ್ತಿರುವುದು, ಬೆಣ್ಣೆಯನ್ನು ತುಂಬಿಸಿ ಒಂದರ ಮೇಲೊಂದು ಇಟ್ಟಿರುವ ಮಡಕೆಗಳಿವೆ. ಇಲ್ಲಿ ಯಶೋಧ ಮತ್ತು ಗೋಪಿಯರ ಚಿತ್ರಗಳಿವೆ. ಬೆಣ್ಣೆಯನ್ನು ತಾನು ತಿಂದು ಬೆಕ್ಕಿಗೆ ಕೊಡುತ್ತಿರುವ ದೃಶ್ಯ, ಬೆಣ್ಣೆಯನ್ನು ಕದಿಯುತ್ತಿರುವುದು, ಗೋಪಿಯರಿಗೆ ಕೀಟಲೆ ಮಾಡಿ ಅವರಿಂದ ಶಿಕ್ಷೆಗೊಳಪಟ್ಟ ದೃಶ್ಯಗಳಿವೆ. ನಂತರದಲ್ಲಿ ಗೋಕುಲದ ಗೋಪಾಲಕರು ಬೆಣ್ಣೆಯನ್ನು ಮಾರಲು ಎತ್ತಿನ ಗಾಡಿಗಳಲ್ಲಿ ಏರಿಕೊಂಡು ಹಾಗೂ ಹೆಗಲ ಮೇಲೆ ಅಡ್ಡಕೋಲುಗಳಲ್ಲಿ ನೇತು ಹಾಕಿಕೊಂಡು ಹೋಗುತ್ತಿರುವ ದೃಶ್ಯ, ಇಲ್ಲಿ ಮನಷ್ಯರು ಹೊತ್ತ ಅಡ್ಡೆಗಳ ಮಡಕೆಗಳಿಂದ ಬೆಣ್ಣೆ ಕದಿಯುವುದು. ಬಾಲ್ಯ ಗೆಳತಿ ರಾಧೆಯ ಜೊತೆ ನೃತ್ಯ ಮಾಡುತ್ತಾ ಆಡುತ್ತಿರುವುದು. ಗೋಪಾಲಕರೊಡನೆ ಆಟವಾಡುತ್ತಿರುವ ದೃಶ್ಯ ಅಲ್ಲಲ್ಲಿ ಮರ ಗಿಡಗಳನ್ನು ಸಹ ಚಿತ್ರಿಸುತ್ತಾ ನೈಸರ್ಗಿಕ ಸಂಪತ್ತನ್ನು ಇಲ್ಲಿ ಮೂಡಿಸಿದ್ದಾನೆ.

ದಕ್ಷಿಣ ಗೂಡಿನಲ್ಲಿ ಇರುವ ಶಿಲ್ಪಗಳು, ಕಾಳಿಂಗಮರ್ಧನ ಇಲ್ಲಿ ನದಿಯನ್ನು ತೋರಿಸಲು ಮೀನುಗಳನ್ನು, ಆಮೆಗಳನ್ನು ಮತು ಸರ್ಪಗಳನ್ನು ನೀರಿನ ಅಲೆಗಳ ರಚನೆಯ ಸಹಿತ ಚಿತ್ರಿಸಿದ್ದಾನೆ. ಇಲ್ಲಿ ಕಾಳಿಂಗನ ಮೇಲೆ ನರ್ತನ ಮಾಡುವಂತೆ ತೋರಿಸಲಾಗಿದೆ. ನಂತರದಲ್ಲಿ ಹರ್ಷೋದ್ಗಾರವಾಗಿರುವ ಗೋಪಾಲಕರನ್ನು ಚಿತ್ರಿಸಿದ್ದು, ಇವರು ಕಾಳಿಂಗನ ಮೇಲಿನ ಗೆಲುವನ್ನು ಆಚರಿಸುವಂತಿದ್ದಾರೆ. ಇದರಿಂದ ಸಂತೋಷಗೊಂಡ ಜನರು ಬಂಡಿಗಳಲ್ಲಿ ಹೆಗಲಮೇಲೆ ಹಾಲು, ಮೊಸರು, ಬೆಣ್ಣೆಗಳನ್ನು ಹೊತ್ತುಕೊಂಡು ಬರುತ್ತಿರುವುದನ್ನು ಚಿತ್ರಿಸಲಾಗಿದೆ. ನಂತರದಲ್ಲಿ ಗೋವರ್ಧನ ಗಿರಿಧಾರಣದ ಚಿತ್ರವಿದೆ. ಇಲ್ಲಿ ಇಂದ್ರನಿಗೆ ಮಾಡುವ ಪೂಜೆಯನ್ನು ವಾಸುದೇವನಿಗೆ ಮಾಡಲು ಪ್ರಾರಂಭಿಸಿದಾಗ ಇಂದ್ರನು ಕೋಪಗೊಂಡು ಧಾರಕಾರವಾಗಿ ಮಳೆಯನ್ನು ಸುರಿಸಿದನು. ಆಗ ಕೃಷ್ಣನು ಊರಿನ ಜನರು ಮತ್ತು ಗೋವುಗಳನ್ನು ರಕ್ಷಿಸಲು ಬೆಟ್ಟವನ್ನು ಕಿರುಬೆರಳಿನಿಂದ ಮೇಲಕ್ಕೆ ಎತ್ತಿ ಇವರಿಗೆ ರಕ್ಷಣೆ ಕೊಟ್ಟ ಕಥಾಪ್ರಸಂಗವನ್ನು ನಿರೂಪಿಸಿರುವುದನ್ನು ಕಾಣಬಹುದು. ಇಲ್ಲಿ ಗೋವುಗಳನ್ನು ಮತ್ತು ಜನರನ್ನು ಚಿತ್ರಿಸಲಾಗಿದೆ. ನಂತರದಲ್ಲಿ ಇಂದ್ರನು ತಪ್ಪನ್ನು ಒಪ್ಪಿಕೊಂಡು ಶರಣಾಗುವ ಶಿಲ್ಪವನ್ನು ಕೆತ್ತಲಾಗಿದೆ.

ಪಶ್ಚಿಮ ಗೂಡಿನಲ್ಲಿರುವ ಪಟ್ಟಿಕೆಗಳ ಶಿಲ್ಪಗಳು, ಕೃಷ್ಣನು ಕೊಳಲನ್ನು ನುಡಿಸುತ್ತಿರುವುದು ಅಕ್ಕ ಪಕ್ಕದಲ್ಲಿ ಗೋವುಗಳು, ಗೋಪಿಕ ಸ್ತ್ರೀಯರು, ಗೋಪಾಲಕರು ಮತ್ತು ದೇವತೆಗಳನ್ನು

ಚಿತ್ರಿಸಲಾಗಿದೆ. ಇದರಲ್ಲಿ ಗೋಪಿಯರು ನೃತ್ಯವನ್ನು ಮಾಡುತ್ತಿರುವುದು ಹಾಗೂ ಕೃಷ್ಣನು ಗೋಪಿಯರಿಗೆ ತತ್ತ್ವೋಪದೇಶವನ್ನು ಮಾಡುತ್ತಿರುವ ಚಿತ್ರಗಳಿವೆ. ಗೋಪಿಯರೊಡನೆ ಜಲಕ್ರೀಡೆ, ಇಬ್ಬರು ಗೋಪಿಯರ ನಡುವೆ ಕೃಷ್ಣ ಗೋಪಿಯರ ವಸ್ತ್ರಾಪಹರಣ ಇದರಲ್ಲಿ ಗೋಪಿಯರನ್ನು ಒಂದೇ ಕಡೆ ನಿಂತಿರುವಂತೆ ಚಿತ್ರಿಸಲಾಗಿದೆ. ಇವರುಗಳು ನಗ್ನರಾಗಿರುವಂತೆ ಚಿತ್ರಿಸಲಾಗಿದೆ. ಮತ್ತೊಂದು ಕಡೆಯಲ್ಲಿ ಅವರ ವಸ್ತ್ರಗಳನ್ನು ಕದ್ದು ಹಿಡಿದುಕೊಂಡು ನಿಂತಿರುವಂತೆ ಕೆತ್ತಲಾಗಿದೆ. ನಂತರದಲ್ಲಿ ಧೇನುಕಾಸುಭಂಜನ ಕಥೆ ನಿರೂಪಣೆಯ ಶಿಲ್ಪವಿದೆ. ಧೇನುಕನು ಗೂಳಿರೂಪದಲ್ಲಿದ್ದು, ಕೃಷ್ಣನ ಮೇಲೆರಗಿ ಬಂದಂತೆ ತೋರಿಸಲಾಗಿದೆ. ನಂತರದಲ್ಲಿ ಕೃಷ್ಣನು ಗೂಳಿಯೊಡನೆ ಸೆಣಸುತ್ತಿರುವ ದೃಶ್ಯವಿದ್ದು ಇದರ ಪಕ್ಕದಲ್ಲಿ ಬಲರಾಮ ಮತ್ತು ಗೋಪಾಲರೂ ಸಹಾಯ ಮಾಡಲು ಸನ್ನದ್ಧರಾಗಿ ನಿಂತಿದ್ದಾರೆ. ನಂತರದಲ್ಲಿ ಗರ್ಧಭಾಸುರದ ನಿರೂಪಣೆಯಿದೆ. ಕತ್ತೆಯ ರೂಪದಲ್ಲಿದ್ದ ರಾಕ್ಷಸನನ್ನು ಸೋಲಿಸುತ್ತಿರುವ ದೃಶ್ಯ ನಂತರದಲ್ಲಿ ವಿಜಯೋತ್ಸವದ ಆಚರಣೆಯಲ್ಲಿ ಇಡೀ ಗ್ರಾಮದ ಜನರು, ಗೋವುಗಳು ಸಾಲಾಗಿ ಮೆರವಣಿಗೆಯಲ್ಲಿ ಹೊರಟಿರುವಂತೆ ಚಿತ್ರಿಸಲಾಗಿದೆ. ನಂತರದಲ್ಲಿ ಕೃಷ್ಣನು ಮತ್ತೊಬ್ಬ ರಾಕ್ಷಸನನ್ನು ಕೊಲ್ಲುತ್ತಿರುವುದು ನಂತರದಲ್ಲಿ ಅಣ್ಣ ಬಲರಾಮನೊಂದಿಗೆ ಮೆರವಣಿಗೆಯಲ್ಲಿ ಹೊರಟಿರುವ ದೃಶ್ಯಗಳಿವೆ.

ಸಾಮಾಜಿಕ ಚಿತ್ರಣಗಳಲ್ಲಿ ಇರುವಂತೆ ಯಶೋಧೆ ಕೃಷ್ಣ, ಮರಕ್ಕೆ ಕಟ್ಟಿರುವ ತೊಟ್ಟಿಲು, ಯಶೋಧೆ ಕೃಷ್ಣ ಬಲರಾಮನು ಕರುವಿನೊಡನೆ ಆಡುವುದು. ಹಾಲು ಕರೆಯುವುದು, ಬೆಣ್ಣೆ ಕದಿಯುವುದು ಇತ್ಯಾದಿ ನಿರೂಪಣೆಗಳಿವೆ. ನಂತರದಲ್ಲಿ ಅಕ್ರೂರನು ಕೃಷ್ಣ ಬಲರಾಮರೊಡನೆ ಬಂಡಿಯಲ್ಲಿ ಮಧುರೆಗೆ ಹೋಗುವುದು, ಇಲ್ಲಿ ಅಕ್ರೂರನ ಹಿಂದೆ ಸಾಲುಗಟ್ಟಿ ಜನರು ಹೊರಟಿರುವುದು, ಗೋಪರು ಅವರೊಡನೆ ಬೆಣ್ಣೆ ಹೊತ್ತುಕೊಂಡು ಹೋಗುವುದು, ಅಕ್ರೂರನ ಆಶಯದ ಮೇರೆಗೆ ಯಮುನೆಯಲ್ಲಿ ಕೃಷ್ಣನು ಅಕ್ರೂರನಿಗೆ ವಿಶ್ವರೂಪವನ್ನು ತೋರಿಸುವುದು, ಮಂಟಪದಲ್ಲಿ ಆಯುಧಪೂಜೆ, ಕೃಷ್ಣ–ಕುಬ್ಜೆ, ಕೃಷ್ಣನು ರಾಕ್ಷಸರನ್ನು ಸಂಹರಿಸುವುದು, ಇಲ್ಲಿ ದ್ವಾರಕೆಗೆ ಹೊರಟ ಇವರಿಗೆ ಕೃಷ್ಣ ಮತ್ತು ಬಲರಾಮರನ್ನು ಕೊಲ್ಲಲು ಕಂಸ ಹೂಡಿದ ಹಲವಾರು ತಂತ್ರಗಳ ದರ್ಶನಗಳನ್ನು ಇಲ್ಲಿ ನಿರೂಪಿಸಲಾಗಿದೆ. ಕೃಷ್ಣನ ಆಗಮನವನ್ನು ಕಂಸನಿಗೆ ತಿಳಿಸುವುದು, ಮಲ್ಲರಿಗೆ ಕೃಷ್ಣನನ್ನು ಕೊಲ್ಲಲು ಕಂಸನು ಆಜ್ಞೆ ಮಾಡುವುದು, ಇಲ್ಲ ಕಂಸನು ಕೃಷ್ಣ, ಬಲರಾಮರನ್ನು ಕೊಲ್ಲಲು ಕುಸ್ತಿ ಮಲ್ಲರಾದ ಚಾಣೂರು ಮುಷ್ಕರರನ್ನು ಕಳುಹಿಸುತ್ತಾನೆ. ಇದರಲ್ಲಿ ಮಲ್ಲರು ಸೋತು ಹೋಗುತ್ತಾರೆ. ನಂತರದಲ್ಲಿ ಆನೆಯನ್ನು ಸಂಹರಿಸುವುದು. ಮಲ್ಲಯುದ್ಧ, ಕಂಸನ ಆಶ್ಚರ್ಯ, ಕಂಸನು ಮಲ್ಲರು ಸೋತ ವಿಷಯ ತಿಳಿದು ಆಶ್ಚರ್ಯ ಪಡುತ್ತಾನೆ. ಇಲ್ಲಿ ಕಂಸನನ್ನು ಎತ್ತರವಾದ

ಸಿಂಹಾಸನದ ಮೇಲೆ ಚಿತ್ರಿಸಲಾಗಿದೆ. ನಂತರದಲ್ಲಿ ಕೃಷ್ಣ ಮತ್ತು ಬಲರಾಮರು ಜೊತೆಗೂಡಿ ಕಂಸನನ್ನು ಕೊಲ್ಲುತ್ತಾರೆ. ಈ ರೀತಿಯಲ್ಲಿ ಕೃಷ್ಣನ ಜೀವನ ಮತ್ತು ಸಾಹಸ ಕಥೆಗಳನ್ನು ತೋರಿಸುವ ಭಾಗವತ ಕಥೆಯ ನಿರೂಪಣೆಯನ್ನು ಶಿಲ್ಪ ಮಾದರಿಯಲ್ಲಿ ಶಿಲ್ಪಿಯು ಕಂಡರಿಸಿದ್ದಾನೆ. ಈ ಕಥಾನಕ ಶಿಲ್ಪಗಳಲ್ಲಿ ವಿಭಿನ್ನ ರೀತಿಯ ಶಿಲ್ಪ ಕೃತಿಗಳ ಕೆತ್ತನೆ ಕಂಡು ಬಂದರೂ ಸಹ ಇಲ್ಲಿ ಕಲಾವಿದನು ಆಕೃತಿಗಳನ್ನು ಪಟ್ಟಿಕೆಯ ಎತ್ತರಕ್ಕೆ ಅನುಗುಣವಾಗಿ ರೂಪಿಸಿ ಕೆತ್ತಿದ್ದಾನೆ. ಏನೇ ಹೊಸತನ್ನು ತೋರಿಸಬೇಕಾದರೆ ಶಿಲ್ಪಗಳನ್ನು ಅಡ್ಡಲಾಗಿ ಅಂದರೆ ಪಟ್ಟಿಕೆಯ ಅಗಲಕ್ಕೆ ಪೂರಕವಾಗಿ ಚಿತ್ರಿಸುತ್ತಾ ಹೋಗುತ್ತಾನೆ. ಇಲ್ಲಿಯ ಮತ್ತೊಂದು ವಿಶೇಷವನ್ನು ಗಮನಿಸಬಹುದು. ಇಲ್ಲಿ ಕೆತ್ತಲ್ಪಟ್ಟಿರುವ ಹಲವು ಶಿಲ್ಪಗಳು ಮುಖ್ಯ ಭಿತ್ತಿಗೆ ಬಂದಾಗ ದೊಡ್ಡ ಶಿಲ್ಪಗಳಾಗಿ ರೂಪಗಳನ್ನು ಪಡೆದಿವೆ. ಹೊಯ್ಸಳ ಕಲಾವಿದನು ಇಂತಹ ಚಿಕ್ಕ ಚಿಕ್ಕ ಸ್ಥಳಗಳನ್ನು ಬಿಡದೆ ಅವುಗಳನ್ನು ಅರ್ಥ ಪೂರ್ಣವಾಗಿ ಬಳಸಿಕೊಂಡಿರುವುದಕ್ಕೆ ಮೇಲೆ ತಿಳಿಸಿದ ಪಟ್ಟಿಕೆಗಳ ಶಿಲ್ಪಗಳೆ ಸಾಕ್ಷಿಯಾಗಿವೆ.

ಐದನೆಯ ಸಾಲಿನಲ್ಲಿ ಮಕರಗಳ ಪಟ್ಟಿಕೆಯಿದೆ. ಇಲ್ಲಿ ಮಕರಗಳನ್ನು ಸಹ ಅದ್ಭುತವಾಗಿ ಚಿತ್ರಿಸಿದ್ದಾನೆ. ದಪ್ಪನಾದ ದೇಹ, ಮೇಲಕ್ಕೆ ಮುಖಮಾಡಿ ತೆರೆದ ಬಾಯಿಗಳಿಂದ ತಲೆ ಹಿಂಬಾಗಕ್ಕೆ ಚಾಚಿಕೊಂಡಿರುವ ಬಳ್ಳಿ ಸುರುಳಿಗಳು ಬಾಲದಿಂದ ಹೊರ ಹೊಮ್ಮುವ ಸುರಳಿಗಳ ಬಳ್ಳಿಗಳು ಈ ಲಕ್ಷಣಗಳನ್ನು ಹೊಂದಿರುವ ಮಕರಗಳು ಒಂದರ ಹಿಂದೆ ಮತ್ತೊದರಂತೆ ಮುಮ್ಮುಖವಾಗಿ ಚಲಿಸುವಂತೆ ಕೆತ್ತಲಾಗಿದೆ.

ಆರನೆಯ ಸಾಲು ಹಾಗೂ ಕೊನೆಯ ಪಟ್ಟಿಕೆಯಾಗಿರುವ ಇದರಲ್ಲಿ ಹಂಸಗಳನ್ನು ಚಿತ್ರಿಸಲಾಗಿದೆ. ಹಂಸಗಳು ಒಂದರ ಹಿಂದೆ ಮತ್ತೊಂದರಂತೆ ಚಲಿಸುವಂತೆ ಮಕರಗಳ ಕೆತ್ತನೆಯಂತೆಯೇ ಇವುಗಳನ್ನು ಅಲಂಕಾರಿಕವಾಗಿ ಕೆತ್ತಿದ್ದಾರೆ. ಹಂಸದ ದೇಹಭಾಗವು ನೈಜವಾಗಿದ್ದು, ಅದರ ಗರಿಗಳನ್ನು ಮಕರದ ಬಾಲದ ಹಾಗೆ ನವಿಲಿನ ಗರಿಗಳ ರೀತಿಯಲ್ಲಿ ಕೆತ್ತಿದ್ದಾರೆ. ಅಲ್ಲಲ್ಲಿ ಸಣ್ಣದಾದ ಹಂಸ ಮರಿಗಳನ್ನು ಚಿತ್ರಿಸಿದ್ದಾರೆ. ಮೂಲೆ ಭಾಗದಲ್ಲಿ ಕೆತ್ತಿರುವ ಹಂಸಗಳನ್ನು ಎರಡು ಹಂಸಗಳು ಎದುರಾಗಿ ಇರುವಂತೆ ಕೆತ್ತಿದ್ದಾರೆ. ಈ ಮೇಲಿನ ಪಟ್ಟಿಕೆಗಳ ಶಿಲ್ಪಗಳನ್ನು ಗಮನಿಸಿದಾಗ ನಿಜಕ್ಕೂ ಇಷ್ಟೊಂದು ನೈಜವಾಗಿ ಚಿತ್ರಿಸಿರುವ ಶಿಲ್ಪಿಗಳೆ ಧನ್ಯರು. ಇವರುಗಳು ಪ್ರತಿಯೊಂದು ಶಿಲ್ಪಕ್ಕೆ ಜೀವಕಳೆಯನ್ನು ಕೊಟ್ಟು ಸೂಕ್ಷ್ಮಾತಿಸೂಕ್ಷ್ಮವಾಗಿ ಚಿತ್ರಿಸಿದ್ದಾರೆ.

**ಭಿತ್ತಿಶಿಲ್ಪಗಳು**

ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳಲ್ಲಿ ಹಲವು ದೇವಾಲಯಗಳ ಹೊರ ಭಿತ್ತಿಯಲ್ಲಿ ಶಿಲ್ಪಗಳನ್ನು ಶಿಲ್ಪಿಗಳು ಕಂಡರಿಸಿದ್ದಾರೆ. ದೇವಾಲಯದ ಹೊರ ಭಿತ್ತಿಯ ಸ್ವಲ್ಪ

ಭಾಗವನ್ನೂ ಬಿಡದೆ ಅಲ್ಲಲ್ಲಿ ಅಲಂಕಾರಿಕ ವಸ್ತುಗಳ ಜೊತೆಗೆ ಒಂದರ ಹಿಂದೆ ಮತ್ತೊಂದರಂತೆ ಶಿಲ್ಪಗಳನ್ನು ಕೆತ್ತಿದ್ದಾರೆ. (ಚಿತ್ರ – 36) ಇವುಗಳಿಗೆ ಸಾಕ್ಷಿಯಾಗಿ ಬೇಲೂರು, ಹಳೇಬೀಡು ಮತ್ತು ಸೋಮನಾಥಪುರದ ದೇವಾಲಯಗಳೇ ಸಾಕ್ಷಿಯಾಗಿವೆ. ಹಾಗು ಈ ದೇವಾಲಯದ ಹೊರ ಭಿತ್ತಿಯಲ್ಲಿ ಅಂದರೆ ಪಶ್ಚಿಮ ಗರ್ಭಗುಡಿಯ ಹೊರ ಭಾಗದಲ್ಲಿ ಮೂರು ದಿಕ್ಕಿನಲ್ಲಿಯೂ ದೇವಕೋಷ್ಠಗಳನ್ನು ಚಿತ್ರಿಸಲಾಗಿದ್ದು ಇವು ಸಹ ಒಂದು ದೇವಾಲಯವು ಯಾವ ಯಾವ ಭಾಗಗಳನ್ನು ಹಾಗು ಲಕ್ಷಣಗಳನ್ನು ಹೊಂದಿರಬೇಕೊ ಅವುಗಳೆಲ್ಲವನ್ನು ಸಾಮಾನ್ಯವಾಗಿ ಹೊಂದಿರುತ್ತದೆ. ಸಾಮಾನ್ಯವಾಗಿ ಬಿಡಿ ಶಿಲ್ಪಗಳನ್ನು ಪೂಜೆಗಾಗಿ ಪ್ರತಿಷ್ಠಾಪಿಸುವ ಶಿಲ್ಪಗಳಾಗಿದ್ದರೆ ಭಿತ್ತಿ ಶಿಲ್ಪಗಳು ದೇವಾಲಯದ ಅಲಂಕರಣೆಯನ್ನು ಹೆಚ್ಚಿಸಲು ಪೂರಕವಾಗಿವೆ. ಈ ದೇವಾಲಯವು ವೈಷ್ಣವ ಧರ್ಮಕ್ಕೆ ಸೇರಿದುದಾಗಿರುವುದರಿಂದ ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವೈಷ್ಣವ ದೇವತೆಗಳನ್ನೆ ಚಿತ್ರಿಸಲಾಗಿದೆ. ಶೈವ ಧರ್ಮಕ್ಕೆ ಸೇರಿದ ಶಿಲ್ಪಗಳು ಕೇವಲ ಬೆರಳೆಣಿಕೆಯಷ್ಟು ಮಾತ್ರ ಇವೆ. ಭಿತ್ತಿಯ ಹಲವು ಶಿಲ್ಪಗಳ ಕೆಳಗೆ ಪೀಠದ ಮೇಲೆ ಶಿಲ್ಪದ ಹೆಸರು ಮತ್ತು ಕೆಲವು ಕಡೆಯಲ್ಲಿ ಶಿಲ್ಪದ ರೂವಾರಿಯ ಹೆಸರುಗಳನ್ನು ಕೆತ್ತಲಾಗಿದೆ. ಪಶ್ಚಿಮ ಗರ್ಭಗುಡಿಯ ಹೊರಭಿತ್ತಿಯಲ್ಲಿ ಪಶ್ಚಿಮ, ಉತ್ತರ, ದಕ್ಷಿಣ ಭಾಗದಲ್ಲಿ ಒಂದೊಂದು ಗೂಡ ಮಂಟಪಗಳಿವೆ. ಇವುಗಳನ್ನು ಬಹಳ ಅಲಂಕರಣದಿಂದ ಚಿತ್ರಿಸಲಾಗಿದೆ. ಇವುಗಳು ದೇವಾಲಯದ ಒಂದು ಭಾಗವಾದರೂ ಸಹ ಒಂದು ಸಣ್ಣ ದೇವಾಲಯದಂತೆ ಅಲಂಕರಿಸಲಾಗಿದೆ. ಗೂಡಿನಲ್ಲಿ ಬಿಡಿ ಶಿಲ್ಪಗಳನ್ನು ಇಡಲಾಗಿದೆ. ಗುಡಿಯ ಮೇಲ್ಭಾಗದಲ್ಲಿ ಸಣ್ಣ ವಿಮಾನದ ರಚನೆಯಿದೆ. ದ್ವಾರಬಂದಗಳನ್ನು, ಸಣ್ಣದಾದ ಅರೆಕಂಭಗಳಿಂದ ಚಿತ್ರಿಸಲಾಗಿದೆ. (ಚಿತ್ರ – 47)

ದೇವಾಲಯದ ಎಡಭಾಗದಿಂದ ಪ್ರದಕ್ಷಿಣೆ ಹಾಕುವ ಮಾರ್ಗವಾಗಿ ಪ್ರಾರಂಭವಾಗುವ ಶಿಲ್ಪಗಳು. ಒಂದನೆಯ ಭಾಗದ ಕಲ್ಪವೃಕ್ಷ, ಮೋಹಿನಿ ಮತ್ತು ದಕ್ಷಿಣಾಮೂರ್ತಿ ಮತ್ತು ಕೇಶವ ಶಿಲ್ಪಗಳು ಇತ್ತೀಚೆಗೆ ಕಟ್ಟಿರುವ ಗೋಡೆಯ ಒಳಭಾಗದಲ್ಲಿ ಸೇರಿಕೊಂಡಿವೆ.[18]

ಎರಡನೆಯ ಭಾಗದಲ್ಲಿ ಮೊದಲನೆಯದು ಬ್ರಹ್ಮನ ಶಿಲ್ಪವಿದೆ (ಚಿತ್ರ – 37) ಇದು ಪದ್ಮ ಪೀಠದ ಮೇಲೆ ಸ್ಥಾನಿಕನಾಗಿ ನಿಂತಿದೆ. ಇದು ತ್ರಿಮುಖವನ್ನು ಹೊಂದಿದ್ದು, ಚೂಪಾದ ಗಡ್ಡವನ್ನು ಚಿತ್ರಿಸಲಾಗಿದೆ. ನಾಲ್ಕು ಕೈಗಳನ್ನು ಹೊಂದಿದೆ. ಬಲಮೇಲಗೈಯಲ್ಲಿ ಸೌಟುಗಳನ್ನು (ಶೃವ್), ಕೆಳಕೈಯಲ್ಲಿ ಅಕ್ಷಮಾಲೆಯನ್ನು ಹಿಡಿದಿದ್ದು ವರದಹಸ್ತವನ್ನು ಹೊಂದಿದೆ. ಎಡಮೇಲಗೈಯಲ್ಲಿ ಪಾಷ ಮತ್ತು ಕಮಂಡಲ ಹಾಗೂ ದಂಡಗಳನ್ನು ಹಿಡಿದಿದೆ. ತಲೆಯಲ್ಲಿ ಸುಂದರವಾದ ತ್ರಿಕೋನಾಕೃತಿಯ ಕಿರೀಟ, ಕರ್ಣ ಕುಂಡಲಗಳು, ಮಣಿಸರಗಳು, ಯಜ್ಞೋಪವೀತವನ್ನು ಧರಿಸಿದೆ. ಬ್ರಹ್ಮನನ್ನು ಹೆಚ್ಚಿನ

ಅಲಂಕರಣದಿಂದ ಮಾಡಲಾಗಿದೆ. ಬ್ರಹ್ಮನ ಬಲಭಾಗದಲ್ಲಿ ಚಾಮರಧಾರಿಣಿ ಎಡಭಾಗದಲ್ಲಿ ಸ್ತ್ರೀ ದೇವತೆಯ ಶಿಲ್ಪವಿದೆ. ಪೀಠದ ಕೆಳಗೆ ಬ್ರೊಮ್ಮರು[19] ಎಂದು ಕನ್ನಡದಲ್ಲಿ ಬ್ರಹ್ಮನ ಹೆಸರನ್ನು ಕೆತ್ತಲಾಗಿದೆ. ಬ್ರಹ್ಮನ ನಂತರದಲ್ಲಿ ಬಹು ಬೀಜ ಫಲವನ್ನು ಹಿಡಿದಿರುವ ಸ್ತ್ರೀ ದೇವತೆಯ ಶಿಲ್ಪವಿದೆ. ಇದರ ಪಕ್ಕದಲ್ಲಿ ನಾರಾಯಣನ ಶಿಲ್ಪವಿದೆ. ಇದು ಸಮಭಂಗದಲ್ಲಿದ್ದು ಅಲಂಕೃತಗೊಂಡಿದೆ. ನಾಲ್ಕು ಕೈಗಳನ್ನು ಹೊಂದಿರುವ ನಾರಾಯಣನು ಶಂಖ, ಚಕ್ರ, ಗದೆ ಮತ್ತು ಪದ್ಮವನ್ನು ಹಿಡಿದಿದ್ದಾನೆ, ಪೀಠದಲ್ಲಿ ಸಿಂಹದ ಮುಖವನ್ನು ಕೆತ್ತಲಾಗಿದ್ದು 'ನಾರಾಯಣ'[20] ಎಂಬ ಹೆಸರನ್ನು ಕೊರೆದಿದ್ದಾರೆ. ಇದರ ಬಲಭಾಗದಲ್ಲಿ ವೀರಾಸನದಲ್ಲಿ ಕುಳಿತಿರುವ ಗರುಢನ ಶಿಲ್ಪವಿದೆ. ನಾರಾಯಣನು ವಿಷ್ಣುವಿನ ಇಪ್ಪತ್ನಾಲ್ಕು ಅವತಾರಗಳಲ್ಲಿ ಒಂದು ಎಂದು ಹೇಳಲಾಗುತ್ತದೆ.[21] ಇದರ ಪಕ್ಕದಲ್ಲಿ ನಗ್ನವಾಗಿ ನಿಂತಿರುವ ಮೋಹಿನಿಯ ಶಿಲ್ಪವಿದೆ. (ಚಿತ್ರ – 38) ಇವಳು ವಸ್ತ್ರವನ್ನು ಧರಿಸದೆ ಕೆಲವು ಕಂಠಾಭರಣಗಳನ್ನು ಧರಿಸಿದ್ದಾಳೆ, ಕಾಲಿಗೆ ಪಾದರಕ್ಷೆಯನ್ನು ಹಾಕಿದ್ದಾಳೆ, ದಪ್ಪನಾದ ದುಂಡನೆಯ ಸ್ತನಗಳನ್ನು ಸಹ ಚಿತ್ರಿಸಿದ್ದು ಕಲಾವಿದನು ಇವಳ ನಗ್ನತೆಯ ರೂಪವನ್ನು ಸಹಜವಾಗಿಯೇ ಚಿತ್ರಿಸಿದ್ದಾನೆ. ನಂತರದಲ್ಲಿ ದಕ್ಷಿಣಾಮೂರ್ತಿಯ? ಶಿಲ್ಪವಿದೆ. ಈತನು ತಲೆಯ ಮೇಲೆ ಕುಲಾವಿ, ಉದ್ದನೆಯ ನಿಲುವಂಗಿ ಮತ್ತು ಪಾದರಕ್ಷೆಗಳನ್ನು ಧರಿಸಿದ್ದಾನೆ. ಬಲಗೈಯಲ್ಲಿ ದಂಡವಿದ್ದು ಎಡಗೈಯಲ್ಲಿ ಪಾತ್ರೆಯ ರೀತಿಯ ವಸ್ತುವನ್ನು ಹಿಡಿದಿದ್ದಾನೆ. ಇದನ್ನು ಎಂ.ಎ.ಆರ್‌ನ ಸಂಪಾಕದರು ದಕ್ಷಿಣಾಮೂರ್ತಿ[22] ಎಂದು ಉಲ್ಲೇಖಿಸಿದ್ದಾರೆ. ಆದರೆ ಇದು ದಕ್ಷಿಣಾಮೂರ್ತಿಯ ಶಿಲ್ಪಗಳಿಗಿಂತ ಸ್ವಲ್ಪ ಭಿನ್ನವಾಗಿದ್ದು ಶಿಲ್ಪಶಾಸ್ತ್ರಗಳಲ್ಲಿ ಉಲ್ಲೇಖಿಸಿರುವ ಕಾಳಾಮುಖ ಯತಿಯ ಶಿಲ್ಪದಂತೆ ಇದೆ.

ಮೂರನೆಯ ಭಾಗದಲ್ಲಿ ಡೋಲೋತ್ಸವದ ಶಿಲ್ಪದಲ್ಲಿ ಕೃಷ್ಣ ರುಕ್ಮಿಣಿಯರು ಉಯ್ಯಾಲೆಯಲ್ಲಿ ಕುಳಿತಿರುವಂತೆ ಚಿತ್ರಿಸಲಾಗಿದೆ. ಉಯ್ಯಾಲೆಯಲ್ಲಿ ಕಟ್ಟಿರುವ ಹಗ್ಗವನ್ನು ಬಹಳ ಸೂಕ್ಷ್ಮವಾಗಿ ಚಿತ್ರಿಸಿದ್ದಾನೆ. ಪಕ್ಕದಲ್ಲಿ ಬಾಳೆಗಿಡಗಳನ್ನು ಚಿತ್ರಿಸಿದ್ದು ಹಣ್ಣುಗಳ ಗೊನೆಯು ನೇತಾಡುವಂತೆಯೂ, ಕಪಿಗಳ ಶಿಲ್ಪಗಳನ್ನು ಸಹ ಅಲ್ಲಲ್ಲಿ ಕೆತ್ತಲಾಗಿದೆ. ಈ ಚಿತ್ರಣವನ್ನು ಪದ್ಮಪೀಠದ ಮೇಲೆ ಚಿತ್ರಿಸಲಾಗಿದೆ. ಇದರ ಪಕ್ಕದಲ್ಲಿ ರತಿ–ಮನ್ಮಥರನ್ನು ಚಿತ್ರಿಸಿದ್ದು ಇವರುಗಳು ಆಕರ್ಷಕ ಭಂಗಿಯಲ್ಲಿದ್ದಾರೆ. (ಚಿತ್ರ – 42) ಮನ್ಮಥನು ಎಡಗೈಯಲ್ಲಿ ಕಬ್ಬಿನ ಜಲ್ಲೆಯನ್ನು ಬಲಗೈಯಲ್ಲಿ ಬಾಣಗಳನ್ನು ಹಿಡಿದಿದ್ದಾನೆ. ರತಿಯನ್ನು ಕಂಠಿಹಾರ ಹಾಗೂ ವಸ್ತ್ರಗಳಿಂದ ಅಲಂಕರಿಸಲಾಗಿದ್ದು ಬಲಗೈಯಲ್ಲಿ ಪುಷ್ಪ ಗುಚ್ಛವನ್ನು ಎಡಗೈಯಲ್ಲಿ ಬಹು ಬೀಜ ಫಲವನ್ನು ಹಿಡಿದಿದ್ದಾಳೆ. ಪೀಠದಲ್ಲಿ 'ಕಾಮ ರತಿ'[23] ಎಂದು ಬರೆಯಲಾಗಿದೆ. ಇದರ ಪಕ್ಕದಲ್ಲಿ ಹಯಗ್ರೀವ ಶಿಲ್ಪವಿದೆ. (ಚಿತ್ರ – 39) ಅಶ್ವಮುಖವನ್ನು ಹೊಂದಿದ್ದು ಕೈಯಲ್ಲಿ ಶಂಖ, ಚಕ್ರ, ಗದ, ಖಡ್ಗ, ಗುರಾಣಿ,

ಗದೆ ಮತ್ತು ಪದ್ಮವನ್ನು ಹಿಡಿದಿದೆ. ಇದರ ಪಕ್ಕದಲ್ಲಿ ಮಾಧವ-ಲಕ್ಷ್ಮಿಯ ಶಿಲ್ಪವಿದೆ. ಮಾಧವನ ಕೈಯಲ್ಲಿ ಶಂಖ, ಚಕ್ರ, ಗದೆ ಮತ್ತು ಪದ್ಮವನ್ನು ಹಿಡಿದಿದ್ದಾನೆ. ಇವನನ್ನು ಸಹ ಬಹಳ ಅಲಂಕಾರಿಕವಾಗಿ ಕೆತ್ತಲಾಗಿದೆ. ಲಕ್ಷ್ಮಿಯ ಶಿಲ್ಪವು ನಿಂತ ಭಂಗಿಯಲ್ಲಿದ್ದು ಕೈಯಲ್ಲಿ ಪುಷ್ಪಗುಚ್ಚ ಮತ್ತು ಜೀಜಪೂರ ಫಲವಿದೆ. ಇವಳನ್ನು ಆಭರಣಗಳಿಂದ ಬಹಳ ಸುಂದರವಾಗಿ ಅಲಂಕರಿಸಲಾಗಿದೆ. ಈ ಎರಡು ಶಿಲ್ಪಗಳ ಮೇಲ್ಭಾಗದಲ್ಲಿ ಸುರುಳಿಯಾಕಾರದ ಮರದ ವಿನ್ಯಾಸವಿದ್ದು ಶಿಲ್ಪಗಳಿಗೆ ಇದು ಮೆರಗನ್ನು ಕೊಡುವಂತಿದೆ. ಇದರ ಪಕ್ಕದಲ್ಲಿ ನಾಟ್ಯಗಣಪತಿಯ ಶಿಲ್ಪವಿದೆ. ನಾಟ್ಯಭಂಗಿಯಲ್ಲಿರುವ ಗಣಪತಿಯು ಎಂಟು ಕೈಗಳನ್ನು ಹೊಂದಿದ್ದು ಪಾಶ, ಅಂಕುಶ, ಕೊಡಲಿ, ಪಾಶ, ಮೋಧಕ ಪಾತ್ರೆ, ಅರ್ಧದಂತ, ಪುಷ್ಪ ಮತ್ತು ಚಕ್ರವನ್ನು ಹಿಡಿದಿದ್ದಾನೆ. ಗಣಪತಿಯ ಎರಡು ಬದಿಯಲ್ಲಿಯೂ ವಾದ್ಯಗಾರರನ್ನು ಚಿತ್ರಿಸಲಾಗಿದೆ. ಕೆಳಭಾಗದಲ್ಲಿ ಗಣೇಶನ ವಾಹನವಾದ ಮೂಷಿಕನನ್ನು ಚಿತ್ರಿಸಲಾಗಿದೆ. ಇದರ ಪಕ್ಕದಲ್ಲಿ ಹೂಗುಚ್ಚ ಹಾಗೂ ಪಾತ್ರೆಯನ್ನು ಹಿಡಿದಿರುವ ಸುಂದರವಾದ ಸ್ತ್ರೀಯ ಶಿಲ್ಪವಿದೆ.

ನಾಲ್ಕನೆಯ ಭಾಗದಲ್ಲಿ ಒಟ್ಟು ಐದು ಶಿಲ್ಪಗಳಿವೆ. ಅಮರನಾರಾಯಣನ ಶಿಲ್ಪವಿದೆ. ಇವನನ್ನು ಪರವಾಸುದೇವ ಹಾಗೂ ಆದಿಮೂರ್ತಿ ಎಂತಲೂ ಕರೆಯುತ್ತಾರೆ.[24] ಇವನು ಏಳು ಹೆಡೆಯ ಸರ್ಪದ ಕೆಳಗೆ ಸರ್ಪದ ಮೇಲೆ ಸುಖಾಸನದಲ್ಲಿ ಕುಳಿತಿದ್ದಾನೆ. ಮುಂದಿನ ಎರಡು ಕೈಗಳನ್ನು ಆರಾಮವಾಗಿ ಆಯುಧಗಳಿಲ್ಲದೆ ಕೆಳಮುಖವಾಗಿ ಬಾಗಿರುವಂತೆ ಬಿಟ್ಟಿದ್ದಾನೆ. ಬಲಗೈಯನ್ನು ಸರ್ಪದ ಮೈಮೇಲೂ ಎಡಕೈಯನ್ನು ಮೊಳಕಾಲ ಮೇಲೆ ಇರಿಸಿದ್ದಾನೆ. ಮೇಲಿನ ಬಲ ಮತ್ತು ಎಡಕೈಗಳಲ್ಲಿ ಶಂಖ, ಚಕ್ರವನ್ನು ಹಿಡಿದಿದ್ದಾನೆ. ಮುಂಭಾಗದಲ್ಲಿ ಗರುಡ ಮತ್ತು ಪ್ರಹ್ಲಾದರು ಅಂಜಲಿಮುದ್ರೆಯಲ್ಲಿದ್ದಾರೆ. ಶಿಲ್ಪದ ಪೀಠದ ಮೇಲೆ 'ಶ್ರೀ ಆದಿಮೂರ್ತಿ ದೇವರನ್ನು ನಂದಿಯ ಬೈಚೋಜನು ಮಾಡಿದ ಕಂಡಿರೆ"[25] ಎಂದು ಉಲ್ಲೇಖಿಸಿದೆ. ಇದನ್ನು ನಂದಿಯ ಬೈಚೋಜ ಎಂಬ ಶಿಲ್ಪಿಯು ಆದಿಮೂರ್ತಿ ದೇವರನ್ನು ಮಾಡಿದ ಎಂದು ತಿಳಿಯುತ್ತದೆ. ಇದರ ಎಡಭಾಗದಲ್ಲಿ ಚಾಮರ ಮತ್ತು ಕಳಸವನ್ನು ಹಿಡಿದಿರುವ ಸ್ತ್ರೀಯ ಶಿಲ್ಪವಿದೆ. ನಂತರದಲ್ಲಿ ಮಾಧವನ ಶಿಲ್ಪವಿದೆ. ಗರುಡ ಪೀಠದ ಮೇಲಿದ್ದು ಅದರ ಮೇಲೆ ಮಾಧವ ಎಂದು ಕೊರೆಯಲಾಗಿದೆ.[26] ಕೈಗಳಲ್ಲಿ ಶಂಖ, ಚಕ್ರ, ಗದೆ ಮತ್ತು ಪದ್ಮವನ್ನು ಹಿಡಿದಿದ್ದಾನೆ. ಇದರ ಪಕ್ಕದಲ್ಲಿ ಗೋವಿಂದನನ್ನು ಚಿತ್ರಿಸಿದ್ದು ಇದನ್ನು ನಾರಾಯಣನ ಶಿಲ್ಪದ ರೀತಿಯಲ್ಲಿ ಕೆತ್ತಲಾಗಿದೆ. ಪೀಠದಲ್ಲಿ ಗೋವಿಂದ ಎಂದು ಉಲ್ಲೇಖಿಸಲಾಗಿದೆ.[27] ನಂತರದಲ್ಲಿ ಯೋಗನರಸಿಂಹನ ಶಿಲ್ಪವಿದೆ. ಯೋಗ ಪಟ್ಟಿಕೆಯನ್ನು ಧರಿಸಿರುವ ಇವನು ಪದ್ಮಪೀಠದ ಮೇಲೆ ಕುಳಿತಿದ್ದಾನೆ. ಲತಾ ಪಟ್ಟಿಕೆಯ ಮೇಲೆ ನರಸಿಂಹ ಎಂದು

ಕೆತ್ತಲಾಗಿದೆ.[28] ಎರಡು ಕೈಗಳನ್ನು ಮೊಳಕಾಲುಗಳ ಮೇಲೆ ಇಳಬಿಟ್ಟಿದ್ದಾನೆ. ಮತ್ತೆರಡು ಕೈಗಳಲ್ಲಿ ಚಕ್ರ ಮತ್ತು ಶಂಖವನ್ನು ಹಿಡಿದಿದ್ದು ಅಕ್ಕ ಪಕ್ಕದಲ್ಲಿ ಶ್ರೀದೇವಿ ಮತ್ತು ಭೂದೇವಿಯರನ್ನು ಕೆತ್ತಲಾಗಿದೆ. ಪಕ್ಕದಲ್ಲಿ ಪ್ರಹ್ಲಾದ ಮತ್ತು ಗರುಡನು ನಿಂತ ಭಂಗಿಯ ಕಿರು ಶಿಲ್ಪಗಳಿವೆ. ನರಸಿಂಹನ ಬಲಭಾಗದಲ್ಲಿ ಲಕ್ಷ್ಮಿಯ ಶಿಲ್ಪವಿದೆ ಬಲಗೈಯಲ್ಲಿ ಪದ್ಮ, ಎಡಗೈಯಲ್ಲಿ ಬಹು ಬೀಜ ಫಲವಿದೆ. ಇದರ ಪಕ್ಕದಲ್ಲಿ ವಿಷ್ಣುವಿನ ಶಿಲ್ಪವಿದೆ. ಸಮಭಂಗದಲ್ಲಿರುವ ವಿಷ್ಣುವು ಕೈಯಲ್ಲಿ ಶಂಖ, ಚಕ್ರ, ಗದೆ ಮತ್ತು ಪದ್ಮವನ್ನು ಹಿಡಿದಿದ್ದಾನೆ. ಪೀಠದಲ್ಲಿ 'ವಿಷ್ಣು' ಎಂದು ಕೊರೆಯಲಾಗಿದೆ.[29] ಬಲಭಾಗದಲ್ಲಿ ಸಿಂಹ ಮುಖವಿದ್ದು ಅದರಿಂದ ಹೊರಟಿರುವ ಲತಾಬಳ್ಳಿಯಿಂದ ಗರುಡನನ್ನು ಚಿತ್ರಿಸಲಾಗಿದೆ. ನಂತರದಲ್ಲಿ ವಿಷ್ಣುವಿನ ರೂಪವಾದ ವರದರಾಜ ಶಿಲ್ಪವಿದೆ. ಸುಖಾಸನದಲ್ಲಿ ಕುಳಿತಿರುವ ಈ ಶಿಲ್ಪವು ಕೈಯಲ್ಲಿ ಶಂಖ, ಚಕ್ರವನ್ನು ಹೊಂದಿದ್ದು ಮತ್ತೆರಡು ಕೈಗಳಲ್ಲಿ ಅಭಯ ಮತ್ತು ವರದ ಹಸ್ತವನ್ನು ಹೊಂದಿದೆ. ಶಿಲ್ಪದ ಕೆಳಭಾಗದಲ್ಲಿ ಗರುಡ ಮತ್ತು ಭಕ್ತನೊಬ್ಬನು ಅಂಜಲಿ ಮುದ್ರೆಯಲ್ಲಿ ಇದ್ದಾರೆ. ಇದಕ್ಕೆ 'ಅಲ್ಲಾಳ ಪೆರಮಾಳ' ಎಂದು ಕರೆಯುತ್ತಾರೆ.[30]

ಐದನೆಯ ಭಾಗದಲ್ಲಿ ಹರಿಹರನ ಶಿಲ್ಪವಿದೆ. ಇದು ಅರ್ಧಭಾಗ ವಿಷ್ಣುವನ್ನು ಮತ್ತರ್ಧಭಾಗ ಶಿವನನ್ನು ಉಲ್ಲೇಖಿಸುವಂತಹ ಶಿಲ್ಪವಾಗಿದೆ. (ಚಿತ್ರ – 43) ಬಲಗೈಯಲ್ಲಿ ತ್ರಿಶೂಲ, ಅಕ್ಷಮಾಲೆಯಿದ್ದು ಎಡಗೈಯಲ್ಲಿ ಚಕ್ರ, ಶಂಖಗಳಿವೆ. ಪೀಠದಲ್ಲಿ ನಂದಿ ಮತ್ತು ಗರುಡನನ್ನು ಚಿತ್ರಿಸಲಾಗಿದೆ. ಇದರ ಪಕ್ಕದಲ್ಲಿ ಮಧುಸೂಧನನ ಶಿಲ್ಪವಿದೆ. ಇದು ವಿಷ್ಣುವಿನ ಅವತಾರದ ಶಿಲ್ಪವಾಗಿದೆ.ಎಡಗೈಯಲ್ಲಿ ಗದೆ, ಪದ್ಮವಿದ್ದು ಬಲಗೈಯಲ್ಲಿ ಚಕ್ರ, ಶಂಖವನ್ನು ತೋರಿಸಲಾಗಿದೆ. ಇದು ಗರುಡ ಪೀಠದ ಮೇಲಿದೆ. ಶಿಲ್ಪದ ಪೀಠದ ಮೇಲೆ 'ಮಧುಸೂಧನ'[31] ಎಂದು ಕೊರೆಯಲಾಗಿದೆ. ಇವನ ಬಲಭಾಗದಲ್ಲಿ ನಿಂತ ಭಂಗಿಯಲ್ಲಿ ಲಕ್ಷ್ಮಿಯನ್ನು ಚಿತ್ರಿಸಲಾಗಿದೆ. ಎರಡೂ ಕೈಗಳಲ್ಲಿ ಅಮೃತ ಕಳಸವನ್ನು ಹಿಡಿದಿದ್ದಾಳೆ. ನಂತರದಲ್ಲಿ ವಾಮನನ ಶಿಲ್ಪವಿದೆ. ಇಲ್ಲಿ ವಿಷ್ಣು ತ್ರಿವಿಕ್ರಮನ ಅವತಾರವನ್ನು ತಾಳಿ ಕೈಗಳಲ್ಲಿ ಶಂಖ, ಚಕ್ರ, ಗದ, ಪದ್ಮವನ್ನು ಆಕಾಶಕ್ಕೆ ಬಲಗಾಲನ್ನು ಮೇಲಕೆತ್ತಿರುವಂತೆ ತೋರಿಸಲಾಗಿದೆ. ಈ ಶಿಲ್ಪವನ್ನು ಕೆತ್ತಿದವನು 'ರುವಾರ ನಂದಿಯ ಬೈಚೋಜನು ಮಾಡಿದ ತ್ರಿವಿಕ್ರಮ'[32] ಎಂದು ಕೆತ್ತಲಾಗಿದೆ. ಇದರ ಕೆಳಭಾಗದಲ್ಲಿ 'ಬಲಿ ವಾಮನ'[33] ಎಂದು ಸಹ ಉಲ್ಲೇಖವಿದೆ.

ಆರನೆಯ ಭಾಗದಲ್ಲಿ ತ್ರಿವಿಕ್ರಮನ ಶಿಲ್ಪವಿದೆ ಜೊತೆಯಲ್ಲಿ ನಾಗ–ಕನ್ಯೆಯನ್ನು ಚಿತ್ರಿಸಲಾಗಿದೆ. ಇವನು ನಾಲ್ಕು ಕೈಗಳನ್ನು ಹೊಂದಿದ್ದು ಬಲಗೈಯಲ್ಲಿ ಗದೆ, ಪದ್ಮವಿದ್ದು ಎಡಗೈಯಲ್ಲಿ ಚಕ್ರ, ಶಂಖಗಳನ್ನು ಹಿಡಿದಿದ್ದಾನೆ. ಎಡಭಾಗದಲ್ಲಿ ನಾಗಕನ್ನಿಕೆಯನ್ನು ಪಕ್ಕದಲ್ಲಿ ಚಿತ್ರಿಸಲಾಗಿದೆ.

ನಾಗಕನ್ನಿಕೆಯು ಮೇಲ್ಭಾಗದಲ್ಲಿ ಮನುಷ್ಯ ರೂಪವನ್ನು ಹೊಂದಿದ್ದು ಕೆಳಭಾಗದಲ್ಲಿ ಸರ್ಪದ ದೇಹವನ್ನು ಹೊಂದಿದ್ದಾಳೆ. ಈಕೆಯನ್ನು ಕಂಠಹಾರಗಳಿಂದ ಅಲಂಕರಿಸಿದ್ದು ಕೈಗಳಲ್ಲಿ ಹಾರವನ್ನು ಹಿಡಿದಿದ್ದಾಳೆ. ಪೀಠದಲ್ಲಿ ಗರುಡನನ್ನು ಚಿತ್ರಿಸಲಾಗಿದೆ. ಮೇಲ್ಭಾಗದಲ್ಲಿ ತ್ರಿವಿಕ್ರಮ ಎಂದು ಕೆತ್ತಲಾಗಿದೆ.[34] ಇದರ ಪಕ್ಕದಲ್ಲಿ ಭೈರವನ ಶಿಲ್ಪವಿದೆ. ಇವನು ನಗ್ನನಾಗಿದ್ದು ಕೈಗಳಲ್ಲಿ ಖಡ್ಗ, ಢಮರುಗ, ಕರಂಡಾಶೂಲವನ್ನು ಮತ್ತು ಮತ್ತೊಂದರಲ್ಲಿ ರುಂಡವನ್ನು ಹಿಡಿದಿದ್ದು ಅದರಿಂದ ತೊಟ್ಟಿಕ್ಕುವ ರಕ್ತವನ್ನು ನಾಯಿಯು ನೆಕ್ಕುತ್ತಿರುವಂತಿದೆ. ಇವನು ರುಂಡಮಾಲೆಯನ್ನು ಧರಿಸಿದ್ದು ತ್ರಿಭಂಗಿಯಲ್ಲಿದ್ದು ಪಾದರಕ್ಷೆಗಳನ್ನು ಧರಿಸಿದ್ದಾನೆ. ಇದರ ಎಡ ಪಾರ್ಶ್ವದಲ್ಲಿ ಕೃಷರೂಪಿಯಾದ ಭಕ್ತನು ಅಂಜಲಿಮುದ್ರೆಯಲ್ಲಿ ನಿಂತಿದ್ದಾನೆ. ಇವನ ಪಕ್ಕದಲ್ಲಿ ಕೃಷ ಶರೀರಿಯಾದ ದುರ್ಗಿಯ ನಾಟ್ಯಭಂಗಿಯಲ್ಲಿದ್ದಾಳೆ. (ಚಿತ್ರ – 44) ಆರು ಕೈಗಳನ್ನು ಹೊಂದಿದ್ದು ಕೈಗಳಲ್ಲಿ ಖಡ್ಗ, ಢಮರುಗ, ಕರಂಡಶೂಲ ಮತ್ತು ಕಾಪಾಲ ಬಟ್ಟಲನ್ನು ಹೊಂದಿದ್ದಾಳೆ. ಅಕ್ಕ ಪಕ್ಕದಲ್ಲಿ ಕೃಷಶರೀರವುಳ್ಳ ವಾದ್ಯಗಾರರು ಮತ್ತು ಎಡಭಾಗದ ಮೇಲ್ಬಾಗದಲ್ಲಿ ಕೃಷರೂಪಿಯಾದ ಭಕ್ತೆಯು ಅಂಜಲಿ ಮುದ್ರೆಯಲ್ಲಿದ್ದಾಳೆ. ನಂತರದಲ್ಲಿ ವಾಮನನ[35] ಶಿಲ್ಪವಿದ್ದು ಇದು ವಿಷ್ಣುವಿನ ಅವತಾರದ ಶಿಲ್ಪವಾಗಿದೆ. ಚತುರ್ಭುಜವನ್ನು ಹೊಂದಿದ್ದು ಸಮಭಂಗದಲ್ಲಿದ್ದಾನೆ. ಕೈಗಳಲ್ಲಿ ಶಂಖ, ಚಕ್ರವಿದ್ದು ಎಡಕೈಗಳಲ್ಲಿ ಪದ್ಮ ಮತ್ತು ಗದೆಯನ್ನು ಹಿಡಿದಿದ್ದಾನೆ. ನಂತರದಲ್ಲಿ ಶ್ರೀಧರನ[36] ಶಿಲ್ಪವಿದೆ. ಇದು ಸಾಮಾನ್ಯವಾಗಿ ವಾಮನನಂತೆಯೇ ಚಿತ್ರಿಸಲಾಗಿದೆ. ಇದರ ಪಕ್ಕದಲ್ಲಿ ಒಂದು ಫಲವನ್ನು ಹಿಡಿದಿರುವ ಎರಡು ವಾನರರನ್ನು ಚಿತ್ರಿಸಿದ್ದಾರೆ. ಇದು ಫಲವನ್ನು ಕಿತ್ತುಕೊಳ್ಳಲು ವಾನರು ಜಗಳವಾಡುತ್ತಿರುವಂತೆ ಶಿಲ್ಪಿಯು ಶಿಲ್ಪಗಳನ್ನು ಕೆತ್ತಿದ್ದಾನೆ. ಇವುಗಳನ್ನು ಎರಡು ಮೂಲೆ ಭಾಗದಲ್ಲಿ ತೋರಿಸಲಾಗಿದೆ.

ಏಳನೆಯ ಭಾಗದಲ್ಲಿ ಗೋವರ್ಧನಗಿರಿಧಾರಿಯ ಶಿಲ್ಪವಿದೆ. (ಚಿತ್ರ – 41)ಕೃಷ್ಣನು ದ್ವಿಭಂಗಿಯಲ್ಲಿ ನಿಂತಿದ್ದು ಬಲಗೈಯನ ಅಂಗೈಯನ ಮೇಲೆ ಗೋವರ್ಧನ ಗಿರಿಭಾರವನ್ನು ಎತ್ತಿ ಹಿಡಿದಿದ್ದಾನೆ. ಪೀಠದಲ್ಲಿ ಸಿಂಹಮುಖದಿಂದ ಅಲಂಕೃತಗೊಳಿಸಲಾಗಿದೆ. ಅಕ್ಕ ಪಕ್ಕದಲ್ಲಿ ಗೋಪಿಕೆಯರು, ಗೋವುಗಳು ಇನ್ನಿತರ ಪ್ರಾಣಿ ಪಕ್ಷಿಗಳಿಂದ ಅಲಂಕರಿಸಲಾಗಿದೆ. ಈ ರೀತಿಯ ಶಿಲ್ಪವು ಅಧಿಷ್ಠಾನದ ಕಥಾನಕ ಪಟ್ಟಿಕೆಯಲ್ಲಿಯೂ ಸಹ ಮೂಡಿಬಂದಿದೆ. ಈ ಶಿಲ್ಪವನ್ನು ಮಾಡಿದವನು ಬೈಚೋಜ[37] ಎಂಬುವವನು. ನಂತರದಲ್ಲಿ ಉಗ್ರನರಸಿಂಹನ ಶಿಲ್ಪವಿದೆ. (ಚಿತ್ರ – 40) ನರಸಿಂಹನು ಹಿರಣ್ಯಕಶುಪುವಿನ ಹೊಟ್ಟೆಯನ್ನು ಬಗೆದು ಕರಳನ್ನು ಕೊರಳಿಗೆ ಹಾಕಿಕೊಂಡಿದ್ದಾನೆ. ಕೈಯಲ್ಲಿಯೂ ಸ್ವಲ್ಪ ಸುತ್ತಿಕೊಂಡಿದ್ದಾನೆ. ಇನ್ನೆರಡು ಕೈಗಳಲ್ಲಿ ಚಕ್ರ, ಶಂಖವನ್ನು ಹಿಡಿದಿದ್ದಾನೆ. ಎಡಭಾಗದಲ್ಲಿ ಗರುಡ ಬಲಭಾಗದಲ್ಲಿ ಲಕ್ಷ್ಮಿ ಮತ್ತು ಕೆಳಭಾಗದಲ್ಲಿ ಪ್ರಹ್ಲಾದನ ಶಿಲ್ಪವಿದೆ. ಪೀಠದ

ಮೇಲೆ ಉಗ್ರನರಸಿಂಹ ಎಂದು ಕೊರೆಯಲಾಗಿದೆ. ಇದರ ಪಕ್ಕದಲ್ಲಿ ಹೃಷಿಕೇಶನ ಶಿಲ್ಪವಿದೆ. ಈ ಶಿಲ್ಪವನ್ನು ಅಷ್ಟೇನು ಅಲಂಕಾರಿಕವಾಗಿ ಕೆತ್ತಲ್ಪಟ್ಟಿಲ್ಲ. ಇದರ ಪಕ್ಕದಲ್ಲಿ ದೇವಕೋಷ್ಠವಿದೆ. ಇದರ ಭಿತ್ತಿಯಲ್ಲಿ ವರಹಾದೇವನ ಶಿಲ್ಪವಿದ್ದು ಅಕ್ಕ ಪಕ್ಕದಲ್ಲಿ ಶ್ರೀದೇವಿ ಮತ್ತು ಭೂದೇವಿಯರನ್ನು ಚಿತ್ರಿಸಲಾಗಿದೆ. ಮತ್ತೊಂದು ಬದಿಯಲ್ಲಿ ನರಸಿಂಹನ ಕುಳಿತ ವಿಗ್ರಹವಿದೆ. ಕೋಷ್ಠದಲ್ಲಿ ದುರ್ಗಿಯ ಶಿಲ್ಪವಿದೆ.

ಒಂಬತ್ತನೆಯ ಭಾಗದಲ್ಲಿ ವಿಷ್ಣುವಿನ ಅವತಾರ ಶಿಲ್ಪಗಳಾದ ಪದ್ಮನಾಭ, ವೇಣುಗೋಪಾಲ, ಸೂರ್ಯ ಮತ್ತು ದಾಮೋಧರರ ಶಿಲ್ಪಗಳಿವೆ. ಸೂರ್ಯನು ಎರಡು ಕೈಗಳಲ್ಲಿ ಪದ್ಮಗಳನ್ನು ಹಿಡಿದಿದ್ದು ಏಳು ಕುದುರೆಗಳಿರುವ ರಥದ ಮೇಲೆ ಸಮಭಂಗದಲ್ಲಿ ನಿಂತಿದ್ದಾನೆ. ಇಕ್ಕೆಲಗಳಲ್ಲಿ ಉಷೆ ಹಾಗೂ ಪ್ರತುಷ್ಯೆಯರಿದ್ದಾರೆ. ಪೀಠದಲ್ಲಿ 'ಸೂರ್ಜ್ಯ'[38] ಎಂದು ಕೆತ್ತಲಾಗಿದೆ. ಇದರ ಪಕ್ಕದಲ್ಲಿ ವೇಣುಗೋಪಾಲನ ಶಿಲ್ಪವಿದೆ. ಈಗಾಗಲೆ ಮೇಲೆ ತಿಳಿಸಿದ ವಿಷ್ಣುವಿನ ಅವತಾರಗಳ ಶಿಲ್ಪಗಳ ವಿವರಣೆಯನ್ನು ನೀಡಿದ್ದೇವೆ.

ಹತ್ತನೆಯ ಭಾಗದಲ್ಲಿ ದೇವಕೋಷ್ಠವಿದ್ದು (ಚಿತ್ರ – 47) ಇದರ ಭಿತ್ತಿಯಲ್ಲಿ ಗರುಡ ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿರುವ ವಿಷ್ಣುವಿನ ತೊಡೆಯ ಮೇಲೆ ಲಕ್ಷ್ಮಿಯು ಕುಳಿತಿದ್ದಾಳೆ. ವಿಷ್ಣುವು ಎಡಗೈಯಿಂದ ಲಕ್ಷ್ಮಿಯ ಬೆನ್ನನ್ನು ಬಾಚಿ ಹಿಡಿದಿದ್ದು, ಆ ಕೈಯಲ್ಲಿ ಚಕ್ರವನ್ನು ಹಿಡಿದಿದ್ದಾನೆ. ಲಕ್ಷ್ಮಿಯು ತನ್ನ ಬಲಗೈಯಿಂದ ವಿಷ್ಣುವಿನ ಬೆನ್ನನ್ನು ಬಳಸಿ ಹಿಡಿದಿದ್ದಾಳೆ. ವಿಷ್ಣುವಿನ ಕೈಗಳಲ್ಲಿ ಪದ್ಮ, ಗದೆ, ಶಂಖವಿದೆ. ಲಕ್ಷ್ಮಿಯ ಎಡಕೈಯಲ್ಲಿ ಪದ್ಮವಿದೆ. ಗರುಡ ಪೀಠದಲ್ಲಿ 'ರೂವಾರಿ ಮಲ್ಲಿತಮ್ಮ'[39] ಎಂದು ಹೆಸರನ್ನು ಕಂಡರಿಸಿದೆ. ಇದರ ಪಕ್ಕದಲ್ಲಿರುವ ಕೋಷ್ಠದಲ್ಲಿ ಹರಿಹರನ ಶಿಲ್ಪವಿದೆ. (ಚಿತ್ರ – 43) ಸಮಭಂಗಿಯಲ್ಲಿರುವ ಹರಿಹರನ ಕೈಗಳಲ್ಲಿ ಅಕ್ಷಮಾಲಾ, ತ್ರಿಶೂಲ, ಚಕ್ರ ಮತ್ತು ಶಂಖವನ್ನು ಹಿಡಿದಿದೆ. ಪೀಠದಲ್ಲಿ ನಂದಿ ಮತ್ತು ಗರುಡನನ್ನು ಚಿತ್ರಿಸಲಾಗಿದೆ. ನಂತರದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಪಾರ್ವತಿಯಿದ್ದು ಕೈಯಲ್ಲಿ ಅಕ್ಷಮಾಲ, ತ್ರಿಶೂಲ ಮತ್ತು ಮಾತುಲುಂಗದ ಹಣ್ಣನ್ನು ಹಿಡಿದಿದ್ದಾಳೆ. ಇದರ ಪಕ್ಕದಲ್ಲಿ ಲಕ್ಷ್ಮಿಯು[40] ಪದ್ಮಾಸನದಲ್ಲಿ ಕುಳಿತಿದ್ದು ಕೈಯಲ್ಲಿ ಅಕ್ಷಮಾಲಾ, ಚಕ್ರ, ಶಂಖ ಮತ್ತು ಗದೆಯನ್ನು ಹಿಡಿದಿದ್ದಾಳೆ. ನಂತರದಲ್ಲಿ ಸರಸ್ವತಿಯ[41] ಪದ್ಮಾಸನದಲ್ಲಿ ಕುಳಿತಿದ್ದು ಕೈಯಲ್ಲಿ ಅಕ್ಷಮಾಲಾ, ದಂಡ, ಅಂಕುಶ ಹಾಗೂ ಕಳಸವನ್ನು ಹಿಡಿದಿದ್ದಾಳೆ. ಈ ಶಿಲ್ಪಗಳನ್ನೆಲ್ಲ ಬಹಳ ಅಲಂಕಾರಿಕವಾಗಿ ಅಲಂಕರಿಸಲಾಗಿದೆ.

ಹನ್ನೊಂದನೆಯ ಭಾಗದಲ್ಲಿ ಸಂಕರ್ಷಣ ಇಂದ್ರ ಮತ್ತು ಆತನ ಹೆಂಡತಿಯಾದ ಸಚಿಯು ಆನೆಯ ಮೇಲೆ ಕುಳಿತ ಶಿಲ್ಪವಿದೆ. ಇದು ಪಾರಿಜಾತ ಅಪಹರಣದ ಕಥೆಯನ್ನು ಸೂಚಿಸುವುದಾಗಿದೆ.

ಇಂದ್ರನು ಎಡಗೈಯಲ್ಲಿ ವಜ್ರವನ್ನು ಹಿಡಿದಿದ್ದಾನೆ. ಹಿಂಭಾಗದಲ್ಲಿ ಸಚಿಯು ಇಂದ್ರನನ್ನು ಹಿಡಿದು ಕುಳಿತಿದ್ದಾಳೆ. ಈ ಶಿಲ್ಪದ ರೂವಾರಿ ಮಲ್ಲಿತಮ್ಮ[42] ನಂತರದಲ್ಲಿ ಕೃಷ್ಣ ಸತ್ಯಭಾಮೆಯರು ಗರುಡನ ಹೆಗಲ ಮೇಲೆ ಕುಳಿತ ಶಿಲ್ಪವಿದೆ. ಗರುಡನನ್ನು ದೊಡ್ಡದಾಗಿ ಚಿತ್ರಿಸಿದ್ದು ಬಲಗೈಯಲ್ಲಿ ವಜ್ರವನ್ನು ಎಡಗೈಯಲ್ಲಿ ಪಾರಿಜಾತ ವೃಕ್ಷವನ್ನು ಹಿಡಿದುಕೊಂಡಿದೆ. ಈ ಪಾರಿಜಾತ ವೃಕ್ಷವು ಅರ್ಧ ವೃತ್ತಾಕಾರವಾಗಿ ಗರುಡನ ತಲೆಯ ಮೇಲೆ ಕೊಡೆಯಂತೆ ರಚನೆಯಾಗಿದೆ. ಕೊನೆಯಲ್ಲಿ ವಾಸುದೇವನ ಶಿಲ್ಪವಿದೆ. ಇದು ವಿಷ್ಣುವಿನ ರೂಪಗಳಲ್ಲಿ ಒಂದಾಗಿದ್ದು ಇದರಲ್ಲಿ ಹೆಚ್ಚಿನ ವಿಶೇಷತೆ ಕಂಡುಬರುವುದಿಲ್ಲ.

ಹನ್ನೆರಡನೆಯ ಭಾಗದಲ್ಲಿ ಯೋಗನಾರಾಯಣನಿದ್ದು ಇವನು ಪದ್ಮಾಸನದಲ್ಲಿ ಕುಳಿತಿದ್ದಾನೆ. ಕೈಯಲ್ಲಿ ಶಂಖ, ಚಕ್ರಗಳನ್ನು ಹಿಡಿದಿದ್ದಾನೆ. ಪಕ್ಕದಲ್ಲಿ ಲಕ್ಷ್ಮಿ ಮತ್ತು ಭೂದೇವಿಯು ಸಹ ಕುಳಿತಿದ್ದು ಇವರು ಕೈಗಳಲ್ಲಿ ಪಾಶ, ಅಂಕುಶ, ಪದ್ಮ ಹಾಗೂ ಬೀಜ ಪೂರ ಫಲವನ್ನು ಹಿಡಿದಿದ್ದಾರೆ. ಈ ಶಿಲ್ಪವು ಕೋಷ್ಠದ ಭಿತ್ತಿಯಲ್ಲಿದೆ. ಪ್ರತಿಯೊಂದು ಶಿಲ್ಪದ ಪೀಠದ ಕೆಳಗೆ ದೇವತೆಗಳ ಹೆಸರುಗಳಿವೆ.[43] ನಂತರದಲ್ಲಿ ಕೋಷ್ಠವಿದ್ದು ಕೋಷ್ಠದ ಒಳಭಾಗದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಸರಸ್ವತಿಯ ಶಿಲ್ಪವಿದೆ. ಚತುರ್ಭುಜವನ್ನು ಹೊಂದಿರುವ ಈಕೆಯು ಬಲಗೈಯಲ್ಲಿ ಅಕ್ಷಮಾಲೆ, ಅಂಕುಶವನ್ನು ಹಿಡಿದಿದ್ದು, ಎಡಗೈಯಲ್ಲಿ ಪುಸ್ತಕ ಮತ್ತು ಪಾಷವನ್ನು ಹಿಡಿದಿದ್ದಾಳೆ. ಶಿಲ್ಪಿಯು ಸರಸ್ವತಿಯ ಶಿಲ್ಪವನ್ನು ಬಹಳ ಅದ್ಭುತವಾಗಿ ಅಲಂಕರಿಸಿದ್ದಾನೆ. ನಂತರದಲ್ಲಿ ನಿಂತ ಭಂಗಿಯಲ್ಲಿರುವ ಹಯಗ್ರೀವನ[44] ಶಿಲ್ಪವಿದೆ. ಇವನು ಅಶ್ವ ಮುಖವನ್ನು ಹೊಂದಿರುವ ವಿಷ್ಣುವಿನ ರೂಪವಾಗಿದ್ದಾನೆ. ಈತನು ಎಂಟು ಕೈಗಳನ್ನು ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗದ, ಪದ್ಮ, ಬಿಲ್ಲು, ಬಾಣ, ಖಡ್ಗ, ಗುರಾಣಿಯನ್ನು ಹಿಡಿದಿದ್ದಾನೆ. ಪೀಠದಲ್ಲಿ ಅಪಸ್ಮಾರಪುರುಷನನ್ನು ಚಿತ್ರಿಸಿದ್ದು ಪೀಠದ ಕೆಳಗೆ ದೇವತೆಯ ಹೆಸರನ್ನು ಕೊರೆಯಲಾಗಿದೆ. ಇವನ ಅಕ್ಕ ಪಕ್ಕದಲ್ಲಿ ಗಣಪತಿ ಮತ್ತು ಸರಸ್ವತಿಯ ಶಿಲ್ಪಗಳಿವೆ.

ಹದಿಮೂರನೆಯ ಭಾಗದಲ್ಲಿ ಪ್ರದ್ಯುಮ್ನನ[45] ಶಿಲ್ಪವಿದೆ. ಇವನು ಸಮಭಂಗಿಯಲ್ಲಿ ಗರುಡ ಪೀಠದ ಮೇಲೆ ನಿಂತಿದ್ದಾನೆ. ಕೈಗಳಲ್ಲಿ ಚಕ್ರ, ಪದ್ಮ, ಶಂಖ ಮತ್ತು ಗದೆಗಳನ್ನು ಹಿಡಿದಿದ್ದಾನೆ. ಇದರ ಪಕ್ಕದಲ್ಲಿ ಗರುಡ ಪೀಠದ ಮೇಲೆ ವರಾಹನ ಶಿಲ್ಪವಿದೆ. ಇವನು ಹತ್ತು ಕೈಗಳನ್ನು ಹೊಂದಿದ್ದು ಗದೆ, ಖಡ್ಗ, ಶಂಖ, ಚಕ್ರ, ಬಿಲ್ಲು, ಬಾಣ, ಶಂಖ, ಗುರಾಣಿ, ಫಲವನ್ನು ಹಿಡಿದಿದ್ದಾನೆ. ಮತ್ತೊಂದು ಕೈಯಿಂದ ಭೂದೇವಿಯ ಕಾಲನ್ನು ಹಿಡಿದಿದ್ದಾನೆ. ಅಕ್ಕ ಪಕ್ಕದಲ್ಲಿ ಪುಷ್ಪಗುಚ್ಛವನ್ನು ಹಿಡಿದಿರುವ ಸ್ತ್ರೀ ದೇವತೆಯರಿದ್ದಾರೆ. ಇದರ ಪಕ್ಕದಲ್ಲಿ ವೇಣುಗೋಪಾಲನ ಶಿಲ್ಪವಿದೆ. ಕೊಳಲನ್ನು ನುಡಿಸುತ್ತಿರುವ

ಕೃಷ್ಣನಿಗೆ ಮನಸೋತು ಅಕ್ಕ ಪಕ್ಕದಲ್ಲಿ ಗೋಪಿಕೆಯರು, ಗೋಪಾಲಕರು ಹಾಗೂ ಗೋವುಗಳನ್ನು ಹಂತ ಹಂತವಾಗಿ ಚಿತ್ರಿಸಲಾಗಿದೆ. ಮೇಲಿನ ಎಲ್ಲಾ ಶಿಲ್ಪಗಳನ್ನು ಕೆತ್ತಿದವನು ಮಲ್ಲಿತಮ್ಮ.

ಹದಿನಾಲ್ಕನೇ ಭಾಗದಲ್ಲಿ ಅನಿರುದ್ಧನನ್ನು[46] ಚಿತ್ರಿಸಲಾಗಿದೆ. ಇವನು ವಿಷ್ಣುವಿನ ರೂಪವಾಗಿದ್ದು ಸ್ಥಾನಕಭಂಗಿಯಲ್ಲಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಗದೆ, ಪದ್ಮವನ್ನು ಹಿಡಿದಿದ್ದಾನೆ. ಇವನ ಬಲಭಾಗದಲ್ಲಿ ಗರುಡನನ್ನು ಚಿತ್ರಿಸಲಾಗಿದೆ. ಎಡಭಾಗದಲ್ಲಿ ಈತನ ಪತ್ನಿಯಾದ ಉಷೆಯ ಶಿಲ್ಪವಿದೆ. ಈ ಶಿಲ್ಪವು ಇಡೀ ದೇವಾಲಯದಲ್ಲಿ ಕಂಡುಬರುವ ಸ್ತ್ರೀ ಶಿಲ್ಪಗಳಲ್ಲೆ ಅದ್ಭುತವಾಗಿದೆ. ಇವಳಿಗೆ ನೀಡಿರುವ ಅಲಂಕರಣವನ್ನು ಬಹುಶಃ ಶಿಲ್ಪಿವು ಯಾವ ಶಿಲ್ಪಕ್ಕೂ ನೀಡಿಲ್ಲ. ಇವಳು ಅಲಂಕಾರಿಕವಾದ ಆಭರಣಗಳು ಹಾಗು ಕುಸುರಿ ಕೆಲಸವಾಗಿರುವ ವಸ್ತ್ರವನ್ನು ಧರಿಸಿದ್ದು ಕಿರೀಟವನ್ನು ಹೊಂದಿದ್ದಾಳೆ. ಇವಳು ನಾಟ್ಯಭಂಗಿಯಲ್ಲಿ ನಿಂತಿದ್ದು ಎರಡು ಕೈಗಳಲ್ಲಿ ಜಡೆಯನ್ನು ಹಿಡಿದಿದ್ದಾಳೆ. ಇವಳು ತಲೆಯಲ್ಲಿ ಎರಡು ಜಡೆಯನ್ನು ಬಹಳ ದಪ್ಪನಾಗಿ ಎಣೆದಿದ್ದು ಕೊನೆಯಲ್ಲಿ ಹೂಗುಚ್ಚವನ್ನು ಕಟ್ಟಿದ್ದಾಳೆ. ಬಲಭಾಗದ ಜಡೆಯನ್ನು ಮೊಣಕಾಲವರೆಗೆ ಇಳಬಿಟ್ಟು ಎಡಗೈಯಲ್ಲೂ, ಎಡಭಾಗದ ಜಡೆಯನ್ನು ಮೊಣಕಾಲವರೆಗೆ ಇಳಬಿಟ್ಟು ಬಲಗೈಯಲ್ಲೂ ಹಿಡಿದಿದ್ದಾಳೆ. ನಂತರದಲ್ಲಿ ಬಲರಾಮನನ್ನು ಚಿತ್ರಿಸಲಾಗಿದೆ. ಈತನು ಹೆಗಲ ಮೇಲೆ ನೇಗಿಲನ್ನು ಇಟ್ಟುಕೊಂಡು ಮೋಹಕ ಭಂಗಿಯಲ್ಲಿದ್ದಾನೆ. ಇವನ ಪಕ್ಕದಲ್ಲಿ ಪುರಷೋತ್ತಮನನ್ನು[47] ಚಿತ್ರಿಸಿದ್ದು ಕೈಗಳಲ್ಲಿ ಚಕ್ರ, ಶಂಖ, ಗದೆ, ಮತ್ತು ಪದ್ಮವನ್ನು ಹಿಡಿದಿದ್ದಾನೆ. ಇವನ ಪಕ್ಕದಲ್ಲಿ ಪುಷ್ಪಗುಚ್ಛವನ್ನು ಹಿಡಿದಿರುವ ಸ್ತ್ರೀಯ ಶಿಲ್ಪವಿದೆ. ಇದರ ಪಕ್ಕದಲ್ಲಿ ನಾಟ್ಯ ಲಕ್ಷ್ಮಿಯನ್ನು ಚಿತ್ರಿಸಲಾಗಿದೆ. ಇವಳು ಅಷ್ಟಭುಜವನ್ನು ಹೊಂದಿದ್ದು ಕೈಗಳಲ್ಲಿ ಅಭಯ, ಪದ್ಮ, ಚಕ್ರ, ಸ್ವರ್ಗಹಸ್ತ, ಶಂಖ, ಫಲ, ಲಂಭಹಸ್ತ ಮತ್ತು ಧನಹಸ್ತವನ್ನು ಹೊಂದಿದ್ದಾಳೆ. ಇಕ್ಕೆಲಗಳಲ್ಲಿ ವಾದ್ಯಾಗಾರರ ಶಿಲ್ಪವನ್ನು ಚಿತ್ರಿಸಲಾಗಿದೆ. ಈ ಶಿಲ್ಪವನ್ನು ಮಾಡಿದವನು ಮಲ್ಲಿತಮ್ಮನಾಗಿದ್ದು ಪೀಠದಲ್ಲಿ ಅವನ ಹೆಸರು ಮತ್ತು ದೇವತೆಯ ಹೆಸರನ್ನು ಕಂಡರಿಸಿದ್ದಾನೆ.[48] ಇದರ ಪಕ್ಕದಲ್ಲಿ ಮಗುವನ್ನು ಎತ್ತಿಕೊಂಡಿರುವ ದ್ವಿಭಂಗಿಯಲ್ಲಿರುವ ಸ್ತ್ರೀಯ ಶಿಲ್ಪವಿದ್ದು ಒಂದು ಕೈಯಲ್ಲಿ ಹಣ್ಣಿನ ಗೊಂಚಲನ್ನು ಹಿಡಿದಿದ್ದಾಳೆ. ಇದರ ಪಕ್ಕದಲ್ಲಿ ಮಹಿಷಾಮರ್ದಿನಿಯ ಶಿಲ್ಪವಿದೆ. ಇವಳು ಸಹ ಅಷ್ಠಭುಜವನ್ನು ಹೊಂದಿದ್ದು ಮಹಿಷನನ್ನು ಎಡಗಾಲಿನಿಂದ ತುಳಿದಿದ್ದಾಳೆ. ಬಲಗೈಯಿಂದ ತ್ರಿಶೂಲದಲ್ಲಿ ರಾಕ್ಷಸನನ್ನು ಕೊಲ್ಲುತ್ತಿದ್ದಾಳೆ. ಉಳಿದ ಕೈಗಳಲ್ಲಿ ಬಿಲ್ಲು, ಖೇಟಕ, ಶಂಖ, ಚಕ್ರ, ಬಾಣಗಳನ್ನು ಹಿಡಿದಿದ್ದಾಳೆ. ಈ ಶಿಲ್ಪಕ್ಕೆ ದುರ್ಗಿ ಎಂಬ ಹೆಸರನ್ನು ಕಂಡರಿಸಿದ್ದು ಇದನ್ನು ಮಾಡಿದಂತಹ ಶಿಲ್ಪಿ ಮಲ್ಲಿತಮ್ಮನ ಹೆಸರನ್ನು ಸಹ ಕಂಡರಿಸಲಾಗಿದೆ.[49] ಇದರ ಬಲಭಾಗದಲ್ಲಿ

ಮೋಹಿನಿಯ ಶಿಲ್ಪವಿದೆ. ಈಕೆಯು ನಗ್ನವಾಗಿದ್ದು ಕಾಳಿಂಗ ಸರ್ಪದೊಡನೆ ನಾಟ್ಯವಾಡುತ್ತಿರುವಂತೆ ಚಿತ್ರಿಸಲಾಗಿದೆ. ಇದರ ಪಕ್ಕದಲ್ಲಿ ಅಧೋಕ್ಷಜನ[50] ಶಿಲ್ಪವಿದೆ. ಇದು ಸಹ ವಿಷ್ಣುವಿನ ರೂಪದ್ದಾಗಿದೆ.

ಹದಿನೈದನೆಯ ಭಾಗದಲ್ಲಿ ಕಾಳಿಂಗಮರ್ಧನ ಕೃಷ್ಣನ ಶಿಲ್ಪವಿದೆ. ಇಲ್ಲಿ ಕೃಷ್ಣನು ಕಾಳಿಂಗ ಸರ್ಪದ ಮೇಲೆ ನಾಟ್ಯವನ್ನು ಮಾಡುತ್ತಿದ್ದಾನೆ. ಎಡಗೈಯಲ್ಲಿ ಸರ್ಪದ ಬಾಲವನ್ನು ಬಲಗೈಯಲ್ಲಿ ಅಭಯ ಹಸ್ತವುಳ್ಳವನಾಗಿದ್ದು ಎಡಗಾಲನ್ನು ಸರ್ಪದ ಮೇಲಿಟ್ಟು ನಾಟ್ಯಮಾಡುತ್ತಿದ್ದಾನೆ. ಅಕ್ಕ ಪಕ್ಕದಲ್ಲಿ ನಾಗ ನಾಗಿಣಿಯು ಕೈಮುಗಿದು ನಿಂತಿರುವ ಶಿಲ್ಪಗಳನ್ನು ಕೆತ್ತಲಾಗಿದೆ. ನಂತರದಲ್ಲಿ ಸಿಂಹ ಮುಖದ ಮೇಲೆ ಸಮಭಂಗದಲ್ಲಿ ನಿಂತಿರುವ ನರಸಿಂಹನ[51] ಶಿಲ್ಪವಿದೆ. ಕೈಗಳಲ್ಲಿ ಶಂಖ, ಚಕ್ರ, ಗದ ಮತ್ತು ಪದ್ಮವನ್ನು ಹಿಡಿದಿದ್ದಾನೆ. ಅಕ್ಕ ಪಕ್ಕದಲ್ಲಿ ಪುಷ್ಪಗುಚ್ಛವನ್ನು ಹಿಡಿದಿರುವ ಸ್ತ್ರೀ ದೇವತೆಗಳನ್ನು ಚಿತ್ರಿಸಿದ್ದಾರೆ. ನಂತರದಲ್ಲಿ ಅರ್ಜುನನ್ನು ಚಿತ್ರಿಸಲಾಗಿದೆ. ಅರ್ಜುನನನು ಕೈಯಲ್ಲಿ ಬಿಲ್ಲು ಬಾಣವನ್ನು ಹಿಡಿದು ಮತ್ಸ್ಯಯಂತ್ರವನ್ನು ಭೇದಿಸುವ ಕಥಾ ನಿರೂಪಣಾ ಶಿಲ್ಪವಾಗಿದೆ. ಇಕ್ಕೆಲಗಳಲ್ಲಿ ದ್ರೌಪತಿಯನ್ನು ಸಹ ತೋರಿಸಿದ್ದಾನೆ.

ಹದಿನಾರನೆಯ ಭಾಗದಲ್ಲಿ ಲಕ್ಷ್ಮಿಯ ಶಿಲ್ಪವಿದೆ. ಇವಳು ಸಮಭಂಗಿಯಲ್ಲಿ ನಿಂತಿದ್ದು ಕೈಯಲ್ಲಿ ಪದ್ಮವನ್ನು ಹಿಡಿದಿದ್ದಾಳೆ. ಇದರ ಪಕ್ಕದಲ್ಲಿ ದಕ್ಷಿಣಾಮೂರ್ತಿಯ ಶಿಲ್ಪವಿದೆ. ದಕ್ಷಿಣಾಮೂರ್ತಿಯ ಕೈಗಳಲ್ಲಿ ವೈಷ್ಣವ ಆಯುಧಗಳನ್ನು ಕೆತ್ತಲಾಗಿದೆ. ಇದರ ಪಕ್ಕದಲ್ಲಿ ಮೋಹಿನಿಯ ಶಿಲ್ಪವಿದೆ. ಇದರಲ್ಲಿ ಕೋತಿಯು ಅವಳ ವಸ್ತ್ರವನ್ನು ಎಳೆಯುತ್ತಿರುವಂತೆಯೂ ಹಾಗೂ ಅವಳು ವಸ್ತ್ರವು ಜಾರದಿರಳೆಂದು ಅದನ್ನು ಹಿಡಿದು ಕೊಂಡಿರುವುದನ್ನು ಚಿತ್ರಿಸಲಾಗಿದೆ. ನಂತರದಲ್ಲಿ ಅಚ್ಯುತನ[52] ಶಿಲ್ಪವಿದೆ. ಇವನು ಗರುಡ ಪೀಠದ ಮೇಲೆ ಸಮಭಂಗಿಯಲ್ಲಿರುವಂತೆ ಚಿತ್ರಿಸಲಾಗಿದೆ. ಬಲಗೈಯಲ್ಲಿ ಪದ್ಮ, ಎಡಗೈಯಲ್ಲಿ ಚಕ್ರ, ಕೆಳ ಎಡಗೈಯಲ್ಲಿ ಶಂಖವನ್ನು ಹಿಡಿದಿದ್ದು ಕೆಳಬಲಗೈಯಲ್ಲಿ ಗದೆಯನ್ನು ಹಿಡಿದಿದ್ದು ಕೆಳಗೆ ಇಟ್ಟುಕೊಂಡಿರುವಂತೆ ಚಿತ್ರಿಸಲಾಗಿದೆ. ಇದರ ಪಕ್ಕದಲ್ಲಿ ಪರಶುರಾಮನ ಶಿಲ್ಪವಿದೆ. ಇವನು ದ್ವಿಭುಜವನ್ನು ಹೊಂದಿದ್ದು ತ್ರಿಭಂಗಿಯಲ್ಲಿ ನಿಂತಿದ್ದಾನೆ. ಬಲಗೈಯಲ್ಲಿ ಕೊಡಲಿಯನ್ನು ಎಡಗೈಯಲ್ಲಿ ಬೀಜಪೂರ ಹಣ್ಣನ್ನು ಹಿಡಿದಿದ್ದಾನೆ. ಇವನ ಪಕ್ಕದಲ್ಲಿ ಲಕ್ಷ್ಮೀನಾರಾಯಣನ ಶಿಲ್ಪವಿದೆ. ಸುಖಾಸನದಲ್ಲಿ ಕುಳಿತಿರುವ ನಾರಾಯಣನು ತೊಡೆಯ ಮೇಲೆ ಲಕ್ಷ್ಮಿಯನ್ನು ಕುಳ್ಳಿರಿಸಿಕೊಂಡಿದ್ದಾನೆ. ಹಿಂಬದಿಯ ಕೈಯಲ್ಲಿ ಶಂಖ, ಚಕ್ರವನ್ನು ಹಿಡಿದಿದ್ದು ಮುಂಭಾಗದ ಬಲ ಕೈಯನ್ನು ವರದ ಹಸ್ತದಲ್ಲಿ ತೋರಿಸಿದ್ದು ಎಡಗೈಯಲ್ಲಿ ಲಕ್ಷ್ಮಿಯ ಬೆನ್ನನ್ನು ಸುತ್ತುವರಿದು ಹಿಡಿದುಕೊಂಡಿದೆ. ನಂತರದಲ್ಲಿ ಜನಾರ್ಧನನ ಶಿಲ್ಪವಿದೆ. ಇವನು ಸಹ ವಿಷ್ಣುವಿನ ರೂಪವಾಗಿದ್ದಾನೆ. ಇವನ ನಂತರದಲ್ಲಿ ಸ್ತ್ರೀಯೊಬ್ಬಳು ಮಗುವನ್ನು ಕಂಕುಳಲ್ಲಿ ಎತ್ತಿಕೊಂಡಿರುವ

ಸುಂದರವಾದ ಶಿಲ್ಪವಿದೆ. ಇದರ ಪಕ್ಕದಲ್ಲಿ ಹಂಸ ಪೀಠದ ಮೇಲೆ ನಾಟ್ಯ ಸರಸ್ವತಿಯ ಶಿಲ್ಪವಿದೆ. ಬಲಭಾಗದ ಕೈಗಳಲ್ಲಿ ಅಕ್ಷಮಾಲೆ, ಬಹು ಬೀಜಫಲ, ಅಂಕುಶವಿದ್ದು ಎಡಕೈಗಳಲ್ಲಿ ಪಾಷ, ಪದ್ಮ, ಮತ್ತು ಪುಸ್ತಕಗಳನ್ನು ಹಿಡಿದಿದ್ದಾಳೆ. ಮತ್ತೆರಡು ಕೈಗಳು ನಾಟ್ಯಭಂಗಿಯಲ್ಲಿವೆ. ಇಕ್ಕೆಲಗಳಲ್ಲಿ ಮೃದಂಗವನ್ನು ಬಾರಿಸುತ್ತಿರುವ ಸಣ್ಣ ಶಿಲ್ಪಗಳಿವೆ.

ಹದಿನೇಳನೆಯ ಭಾಗದಲ್ಲಿ ಹಯಗ್ರೀವ ಶಿಲ್ಪವಿದೆ. ಇವನು ಸಹ ವಿಷ್ಣುವಿನ ರೂಪವಾಗಿದ್ದಾನೆ. (ಚಿತ್ರ – 39) ಪೀಠದಲ್ಲಿ ಅಪಸ್ಮಾರಪುರಷನನ್ನು ಚಿತ್ರಿಸಲಾಗಿದೆ. ಇವನ ಮುಖವು ಅಶ್ವದ ರೀತಿಯನ್ನು ಹೊಂದಿರುವುದರಿಂದ ಇವನನ್ನು ಹಯಗ್ರೀವ ಎಂದು ಕರೆಯಲಾಗುತ್ತಿದೆ. ಬಲಕೈಗಳಲ್ಲಿ ಗದೆ, ಬಾಣ, ಚಕ್ರ, ಖಡ್ಗಗಳಿದ್ದು ಎಡಕೈಗಳಲ್ಲಿ ಪದ್ಮ, ಬಿಲ್ಲು, ಖೇಟಕ, ಶಂಖಗಳು ಕಂಡುಬರುತ್ತವೆ. ನಂತರದಲ್ಲಿ ತ್ರಿಭಂಗಿಯಲ್ಲಿರುವ ಸುಂದರವಾದ ಅಲಂಕರಣಯುಕ್ತ ಸ್ತ್ರೀಯ ಶಿಲ್ಪವಿದೆ. ಇವಳ ಬಲಗೈಯಲ್ಲಿ ಗಿಣಿಯು ಕುಳಿತಿದ್ದು ಎಡಗೈಯಲ್ಲಿ ಬಾಣವನ್ನು ಹಿಡಿದಿದ್ದಾಳೆ. ನಂತರದಲ್ಲಿ ಉಪೇಂದ್ರನ[53] ಶಿಲ್ಪವಿದೆ. ಇವನು ಸಹ ವಿಷ್ಣುವಿನ ರೂಪವಾಗಿದ್ದಾನೆ. ನಂತರದಲ್ಲಿ ಕೋದಂಡರಾಮ, ಲಕ್ಷ್ಮಣ ಮತು ಸೀತೆಯ ಶಿಲ್ಪಗಳಿವೆ. ರಾಮ ಮತ್ತು ಲಕ್ಷ್ಮಣನ ಕೈಯಲ್ಲಿ ಬಿಲ್ಲು ಬಾಣವಿದೆ. ಸೀತೆಯು ಕೈಯಲ್ಲಿ ಫಲವನ್ನು ಹಿಡಿದಿದ್ದಾಳೆ. ನಂತರದಲ್ಲಿ ಹನುಮಂತನು ಕೈಮುಗಿದು ನಿಂತಿರುವಂತೆ ಚಿತ್ರಿಸಲಾಗಿದೆ.

ಹದಿನೆಂಟನೆಯ ಭಾಗದಲ್ಲಿ ಹರಿಯ ಶಿಲ್ಪವಿದೆ. ಇದು ವಿಷ್ಣುವಿನ ಲಕ್ಷಣಗಳನ್ನು ಹೊಂದಿದೆ. ಇದರ ಪಕ್ಕದಲ್ಲಿ ಗರುಡ ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತ ವಿಷ್ಣುವಿನ ಶಿಲ್ಪವಿದೆ. ಇವನು ಎರಡು ಕೈಗಳನ್ನು ಹೊಂದಿದ್ದು ಬಲಗೈಯಲ್ಲಿ ಪಾಯಸದ ಬಟ್ಟಲನ್ನು ಎಡಗೈಯಲ್ಲಿ ಅಮೃತ ಕಲಶವನ್ನು ಹಿಡಿದಿದ್ದಾನೆ. ಶಿಲ್ಪದ ಸುತ್ತಲೂ ವೃತ್ತಾಕಾರದ ಪ್ರಭಾವಳಿಯಿದ್ದು ಇಲ್ಲಿ ವಿಷ್ಣುವಿನ ಆಯುಧಗಳಾದ ಶಂಖ, ಚಕ್ರಗಳನ್ನು ತೋರಿಸಲಾಗಿದೆ. ಈ ಶಿಲ್ಪವನ್ನು ಮಾಡಿದವನು ಮಲ್ಲಿತಮ್ಮ.

ಹತ್ತೊಂಬತ್ತನೆಯ ಹಾಗೂ ದೇವಾಲಯದ ಕೊನೆಯ ಭಾಗದಲ್ಲಿ ಕೃಷ್ಣನನ್ನು ಕೆತ್ತಲಾಗಿದೆ. ಇದು ವಿಷ್ಣುವಿನ ಇಪ್ಪತ್ನಾಲ್ಕು ರೂಪಗಳಲ್ಲಿ ಕೊನೆಯದಾಗಿದೆ. ಇದರ ಪಕ್ಕದಲ್ಲಿ ಲಕ್ಷ್ಮಿ ಮತ್ತು ಕಾಮಧೇನುವಿನ ಶಿಲ್ಪವಿದೆ. ಕಾಮಧೇನುವಿನ ಬೆನ್ನ ಮೇಲೆ ಛತ್ರಿಯನ್ನು ಚಿತ್ರಿಸಲಾಗಿದೆ.

ಈ ಭಿತ್ತಿಶಿಲ್ಪಗಳ ಮೇಲ್ಭಾಗದಲ್ಲಿ ಸಣ್ಣದಾದ ಕಾರ್ನೀಸನ್ನು ಮಾಡಿದ್ದು ಇದು ಮುಂಚಾಚಿದೆ. ಇದರಲ್ಲಿ ಸಣ್ಣದಾದ ಒತ್ತೊತ್ತಾಗಿರುವ ಗುಬುಟುಗಳನ್ನು ಮಾಡಿದ್ದು ಇವುಗಳು ಆ ಭಾಗಕ್ಕೆ ಬಹಳ ಅಲಂಕಾರಿಕವಾಗಿ ಕಾಣುತ್ತವೆ. ಇದರ ಮೇಲ್ಭಾಗದ ಗೋಪುರಗಳಲ್ಲಿ ಸಣ್ಣ ಸಣ್ಣ ವಿಗ್ರಹಗಳಿವೆ. ಕೆಲವು ವಿಗ್ರಹಗಳು ಗೋಪುರ ಅಲಂಕರಣೆಯನ್ನು ಹೊಂದಿದ್ದರೆ ಮತ್ತೆ ಕೆಲವು ಕಂಭಗೋಪುರಗಳ

ಕೆಳಗೆ ಚಿತ್ರಿಸಿದ್ದಾರೆ. ಈ ಸಣ್ಣ ಗೋಪುರಗಳು ಸಹ ದೇವಾಲಯದ ಹೊರ ಭಿತ್ತಿಗೆ ಬಹಳ ಅಲಂಕಾರಿಕವಾಗಿ ಕಾಣುತ್ತವೆ. ಇಲ್ಲಿ ಸೂರ್ಯ, ಛಾಯ, ನಾಟ್ಯಲಕ್ಷ್ಮಿ, ವಿಷ್ಣುವಿನ ದಶಾವತಾರಗಳ ಚಿತ್ರಗಳು, ಸಮುದ್ರಮಂಥನ, ಅನಂತಶಾಯಿ, ಋಷಿ, ಇನ್ನೂ ಮುಂತಾದ ಸಣ್ಣ ಶಿಲ್ಪಗಳನ್ನು ಕೆತ್ತಲಾಗಿದೆ. ಪ್ರತಿಯೊಂದು ವಿಗ್ರಹಗಳ ಮೇಲೆ ಶಿಖರಗಳ ಅಲಂಕರಣೆಯಿದೆ. ಈ ಸಣ್ಣ ಬುರುಜುಗಳು ಚೌಕಾಕಾರ ಹಾಗೂ ನಕ್ಷತ್ರಾಕಾರದ ವಿನ್ಯಾಸವನ್ನು ಹೊಂದಿವೆ. ಇದರ ಮೇಲ್ಭಾಗದಲ್ಲಿ ದೇವಾಲಯದ ಸುತ್ತಲೂ ಮುಂಚಾಚಿದ ಕಪೋತವಿದ್ದು ಇದು ಮಳೆಯ ನೀರು ಶಿಲ್ಪಗಳಗೆ ಹಾಗು ಭಿತ್ತಿಗಳಗೆ ಬೀಳದ ಹಾಗೆ ನಿರ್ಮಿಸಿದ್ದಾರೆ. ಇದನ್ನು ಸಹ ಅಲಂಕಾರಿಕವಾಗಿ ಮಾಡಲಾಗಿದ್ದು ಸುತ್ತಲೂ ಸಣ್ಣದಾದ ಇಳಬಿಟ್ಟ ಗುಬುಟುಗಳನ್ನು ಕೆತ್ತಲಾಗಿದೆ. ಈ ರೀತಿಯ ಅಲಂಕರಣೆಯು ಕೆಳಭಾಗದಲ್ಲಿರುವ ಶಿಲ್ಪಗಳ ಮೇಲಿರುವ ಕಪೋತದಲ್ಲಿಯೂ ಕಂಡುಬರುತ್ತದೆ. ಹಾಗೂ ಮೇಲ್ಭಾಗದಲ್ಲಿರುವ ಭದ್ರಶಾಲಾ ಹಾಗೂ ಶಾಲಾಗಳನ್ನು ಅಲಂಕರಿಸಿದ್ದು ಅಲ್ಲಲ್ಲಿ ಕೀರ್ತಿಮುಖ, ವ್ಯಾಘ್ರಮುಖ, ಹಂಸಮುಖ ಹಾಗೂ ಕೆಲವು ಯಕ್ಷ ಹಾಗೂ ವಿಷ್ಣುವಿನ ನಿರೂಪಣಾ ಶಿಲ್ಪಗಳನ್ನು ಕೆತ್ತಲಾಗಿದೆ.

**ಶಿಖರಗಳು**

ದೇವಾಲಯವು ತ್ರಿಕೂಟಾಚಲ ದೇವಾಲಯವಾಗಿದ್ದು ಇದರಲ್ಲಿ ಮೂರು ಶಿಖರಗಳಿವೆ. ಆದರೆ ಮೂಲ ದೇವಾಲಯವನ್ನು ನಿರ್ಮಿಸುವಾಗ ಪಶ್ಚಿಮ ಭಾಗದ ಗರ್ಭಗುಡಿಯ ಮೇಲ್ಭಾಗದಲ್ಲಿರುವ ಶಿಖರವನ್ನು ಕಟ್ಟಲಾಗಿದೆ. ಇದು ವೇಸರ ಶೈಲಿಯಲ್ಲಿದೆ. ಉತ್ತರ ಮತ್ತು ದಕ್ಷಿಣ ಭಾಗದಲ್ಲಿರುವ ಶಿಖರಗಳನ್ನು ಇಟ್ಟಿಗೆ ಮತ್ತು ಗಾರೆಯಿಂದ ಇತ್ತೀಚೆಗೆ ಕಟ್ಟಿದ್ದಾರೆ.[54] (ಚಿತ್ರ – 32,33) ಇದನ್ನು ಕ್ರಿ.ಶ.17ನೆಯ ಶತಮಾನದಲ್ಲಿ ಕಟ್ಟಲಾಗಿದೆ.[55] ಪಶ್ಚಿಮ ಭಾಗದಲ್ಲಿರುವ ಶಿಖರವನ್ನು ಸೋಪುಗಲ್ಲಿನಿಂದ ಕಟ್ಟಲಾಗಿದ್ದು ಸಂಪೂರ್ಣವಾಗಿ ಹೊಯ್ಸಳ ವಾಸ್ತುಶೈಲಿಯನ್ನು ಹೊಂದಿದೆ. ಇಲ್ಲಿ ಮೂರು ಹಂತದ ರಚನೆಯನ್ನು ಮಾಡಿದ್ದು ಇದರ ಮೇಲ್ಭಾಗದಲ್ಲಿ ಸ್ತೂಪಿ ಇದ್ದು ಇದರ ಮೇಲೆ ಕಲ್ಲಿನ ಕಳಸವಿದೆ. ಇಲ್ಲಿನ ಭದ್ರಶಾಲಾ ಹಾಗೂ ಶಾಲಾಗಳನ್ನು ಬಹಳ ಅಲಂಕರಣಗೊಳಿಸಲಾಗಿದೆ. ಪ್ರತಿಯೊಂದು ಭದ್ರಶಾಲಾಗಳಲ್ಲಿಯೂ ವಿಷ್ಣುವಿನ ನಿರೂಪಣಾ ಶಿಲ್ಪಗಳಿವೆ. ಶಾಲಾಗಳಲ್ಲಿ ಯಕ್ಷರ ಶಿಲ್ಪಗಳಿವೆ. ಅಲ್ಲಲ್ಲಿ ಕೀರ್ತಿಮುಖವನ್ನು ಚಿತ್ರಿಸಲಾಗಿದ್ದು ಮಧ್ಯಭಾಗದಲ್ಲಿ ಗರುಡನನ್ನು ಚಿತ್ರಿಸಲಾಗಿದೆ. ಸುಖನಾಸಿಯ ಮೇಲೆ ಯಾವುದೇ ಶಿಲ್ಪವಿಲ್ಲ. ಮುಂಚಾಚಿರುವ ಇಲ್ಲಿಯ ಭಾಗದಲ್ಲಿ ಕೀರ್ತಿಮುಖ ಗರುಡ ಇವೆ. ಕೀರ್ತಿಮುಖದ ಕೆಳಗೆ ಚತುರ್ಭುಜದ ಯಕ್ಷವಿಗ್ರಹವಿದೆ.

## ಸದಾಶಿವ ದೇವಾಲಯ

ಈ ದೇವಾಲಯವು ಲಕ್ಷ್ಮೀನರಸಿಂಹ ದೇವಾಲಯದ ಈಶಾನ್ಯ ಭಾಗದಲ್ಲಿದೆ. ದೇವಾಲಯವನ್ನು ಹೊಯ್ಸಳ ಸೋಮೇಶ್ವರನ ಆಳ್ವಿಕೆಯ ಕಾಲದಲ್ಲಿ ಅವನ ಸಂಧಿವಿಗ್ರಹಿಯಾದ ಬೊಮ್ಮಣ್ಣ ದಂಡನಾಯಕನು ಕ್ರಿ.ಶ. 1249ರಲ್ಲಿ[56] ಕಟ್ಟಿಸಿದನು. ಹೊಯ್ಸಳರ ಕಾಲದಲ್ಲಿ ನಿರ್ಮಿತವಾದಂತಹ ಅನೇಕ ದೇವಾಲಯಗಳು ಏನಾದರೂ ಒಂದು ವಿಶೇಷತೆಯನ್ನು ಹೊಂದಿರುತ್ತವೆ. ಇವುಗಳು ವಾಸ್ತುವಿನ ರೂಪದಲ್ಲಾಗಿರಬಹುದು ಅಥವಾ ಶಿಲ್ಪರೂಪದ ಬಳಕೆಯಲ್ಲಾಗಿರಬಹುದು. ಅದೇ ರೀತಿಯಲ್ಲಿ ಇದು ಸಹ ಒಂದು ವಿಶೇಷರೂಪವನ್ನು ವಾಸ್ತು ಶೈಲಿಯಲ್ಲಿ ಹೊಂದಿದೆ. ಇದು ನಾಗರ ಶಿಖರವುಳ್ಳ ದೇವಾಲಯವಾಗಿದೆ. ಲಕ್ಷ್ಮೀನರಸಿಂಹ ದೇವಾಲಯವು ತ್ರಿಕೂಟಾಚಲಾವಾಗಿದ್ದು ಹೆಚ್ಚಿನ ಅಲಂಕರಣವನ್ನು ಹೊಂದಿದ್ದು ಭಿತ್ತಿಶಿಲ್ಪಗಳನ್ನು ಹೊಂದಿದೆ. ಆದರೆ ಅಲ್ಲಿಯ ವಿಶೇಷತೆ ಎಂದರೆ ಹೊಯ್ಸಳರ ಕಾಲದಲ್ಲಿಯೇ ನಿರ್ಮಾಣವಾಗಿರುವ ಮುಖ್ಯದ್ವಾರ ಮಂಟಪ. ಅದೇ ರೀತಿಯಲ್ಲಿ ಈ ದೇವಾಲಯದ ವಾಸ್ತು ಲಕ್ಷಣವು ಸಹ ವಿಶೇಷವಾಗಿ ದ್ರಾವಿಡ ಮಿಶ್ರಿತ ನಾಗರವಾಸ್ತುವನ್ನು ಕಾಣಬಹುದು. (ಚಿತ್ರ – 51)

ದೇವಾಲಯವನ್ನು ಸೋಪುಗಲ್ಲಿನಿಂದ ಕಟ್ಟಲಾಗಿದ್ದು ಇದು ಜಗತಿ, ಗರ್ಭಗೃಹ, ಸುಖನಾಸಿ, ನವರಂಗ ಮತ್ತು ನಂದಿಮಂಟಪವನ್ನು ಹೊಂದಿದೆ. ಇವಿಷ್ಟು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದಂತಹ ವಾಸ್ತುವಾಗಿವೆ. ದೇವಾಲಯದ ಮುಂದುವರೆದ ವಾಸ್ತುವಾದ ಹಜಾರ, ಚಿಕ್ಕದಾದ ಮುಖಮಂಟಪ, ಪಾತಾಳಂಕಣ, ದೀಪಸ್ತಂಭ ಹಾಗೂ ಮುಖ್ಯದ್ವಾರ ಮಂಟಪವು ವಿಜಯನಗರದ ಕಾಲದಲ್ಲಿ ಹಾಗೂ ಪಾಳೆಗಾರರ ಕಾಲದಲ್ಲಿ ನಿರ್ಮಾಣವಾಗಿದೆ.[57] ಕ್ರಿ.ಶ. 1435ರ[58] ಶಾಸನದಲ್ಲಿ ವಿಜಯನಗರದ ರಾಜ ಶ್ರೀ ವೀರಪ್ರತಾಪ ದೇವರಾಯಮಹಾರಾಯರೂ ಆಡಳಿತ ನಡೆಸುತ್ತಿದ್ದುದು ತಿಳಿದುಬರುತ್ತದೆ. ಇದರಲ್ಲಿ ಅವುತಿನಾಯಕರ ಮಕ್ಕಳಾದ ಕಟ್ಟಿಗೆಯ ಗುಂಡಪ್ಪನಾಯಕರೂ ವಿಜಯ ಸೋಮನಾಥಪುರವಾದ ನುಗ್ಗೇಹಳ್ಳಿಯನ್ನು ಆಳುತ್ತಿದ್ದರೆಂದು ಉಲ್ಲೇಖವಿದೆ. ಹಾಗಾಗಿ ಇವರ ಕಾಲದಲ್ಲಿಯೂ ಲಕ್ಷ್ಮೀನರಸಿಂಹ ಹಾಗೂ ಸದಾಶಿವ ದೇವಾಲಯದ ಮುಂದುವರೆದ ವಾಸ್ತುವನ್ನು ಕಟ್ಟಿಸಿದ್ದಾರೆ.

### ಜಗತಿ

ದೇವಾಲಯದ ತಳವಿನ್ಯಾಸವು ಅಷ್ಟಮುಖ ಕೋನಗಳುಳ್ಳ ನಕ್ಷತ್ರಾಕಾರವನ್ನು ಹೊಂದಿದೆ. (ಚಿತ್ರ – 51,52) ಇಲ್ಲಿ ಸುಮಾರು ಮೂರು ಅಡಿ ಎತ್ತರ ಹಾಗು ಸುಮಾರು 6 ಅಡಿ ವಿಶಾಲತೆಯನ್ನು ಹೊಂದಿದೆ. ಇದರಲ್ಲಿ ಹಿಂಬಣಿ ಮತ್ತು ಮುಂಬಣಿಗಳಿಂದ ಕೂಡಿದ

ಪಟ್ಟಿಕೆಯೊಂದಿಗೆ ಅದಿಷ್ಠಾನದಲ್ಲಿರುವ ಕೆಲವು ಲಕ್ಷಣಗಳನ್ನು ಇಲ್ಲಿ ಕಾಣಬಹುದು. ದೇವಾಲಯವು ನಿರಾಂದರ ದೇವಾಲಯವಾಗಿರುವುದರಿಂದ ಬಹುಶಃ ಹೊರಗಿನಿಂದಲೇ ದೇವಾಲಯದ ಪ್ರದಕ್ಷಿಣೆಯನ್ನು ಮಾಡಲು ಈ ರೀತಿಯ ಜಗತಿಯನ್ನು ನಿರ್ಮಿಸಿದ್ದಾರೆ.

**ಅಧಿಷ್ಠಾನ**

ಅಧಿಷ್ಠಾನವು ಸುಮಾರು ನಾಲ್ಕು ಅಡಿ ಎತ್ತರವಿದೆ. ಇಲ್ಲಿ ಜಗತಿ, ಉಪಾನ, ಪಟ್ಟಿಕೆ, ಮೊನಚಾದ ತ್ರಿಪಟ್ಟಕುಮುದ ಹಾಗೂ ಪ್ರತಿಗಳನ್ನು ಹೊಂದಿದೆ. (ಚಿತ್ರ – 51,52,53) ಇದರಲ್ಲಿ ಲಕ್ಷ್ಮೀನರಸಿಂಹ ದೇವಾಲಯದ ರೀತಿಯ ಅಲಂಕರಣ ಪಟ್ಟಿಕೆಯಿರುವುದಿಲ್ಲ.

**ಹೊರಭಿತ್ತಿ**

ದೇವಾಲಯದ ಹೊರಭಿತ್ತಿಯಲ್ಲಿ ಯಾವುದೇ ಅಲಂಕರಣಶಿಲ್ಪವನ್ನು ಹೊಂದಿಲ್ಲ. ಆದರೆ ವಾಸ್ತುವು ಹೊರ ಮತ್ತು ಒಳಚಾಚುಗಳುಳ್ಳ ಅಲಂಕರಣೆಯನ್ನು ಹೊಂದಿದೆ. ಭಿತ್ತಿಯಲ್ಲಿ ಸ್ತಂಭಗಳ ಅಲಂಕರಣವಿದ್ದು ಇವುಗಳು ಅಷ್ಠಮುಖಗಳನ್ನು ಹೊಂದಿವೆ. ಅಲ್ಲಲ್ಲಿ ನಕ್ಷತ್ರಾಕಾರದ ಮಾದರಿಯನ್ನು ಹೊಂದಿವೆ. ಇದಕ್ಕೆ ಹೊಂದಿಕೊಂಡತೆ ಕಪೋತಬಂಧವು ಸಹ ಸರಳವಿನ್ಯಾಸದೊಂದಿಗೆ ಭಿತ್ತಿಯ ಅಲಂಕರಣವನ್ನೇ ಅನುಸರಿಸಿದೆ. (ಚಿತ್ರ – 51) ಭಿತ್ತಿಯ ಉತ್ತರ ಭಾಗದಲ್ಲಿ ಮಂಟಪದ ರಚನೆಯೊಳಗೆ ತ್ರಿಮುಖ ಬ್ರಹ್ಮನು? ಪದ್ಮಾಸನದಲ್ಲಿ ಕುಳಿತಿರುವ ಶಿಲ್ಪವಿದೆ. ಮೇಲ್ಭಾಗದಲ್ಲಿ ಛತ್ರಿಯ ರೀತಿಯಲ್ಲಿ ಚಿತ್ರಿಸಿದೆ. ಆದರೆ ಶಿಲ್ಪದ ಮುಖ, ಹಾಗೂ ದೇಹದಸ್ವಲ್ಪಭಾಗವು ಭಗ್ನವಾಗಿದ್ದು ಅಸ್ಪಷ್ಟವಾಗಿ ಕಾಣುತ್ತಿದೆ. ಮಂಟಪದ ರಚನೆಗೆ ಎರಡು ಬದಿಯಲ್ಲೂ ನಕ್ಷತ್ರಾಕಾರದ ಕಂಭಗಳ ರೀತಿಯಲ್ಲಿ ಚಿತ್ರಿಸಿದ್ದಾರೆ. ಮೇಲ್ಬಾಗದ ಶಿಖರವು ಸಹ ದೇವಾಲಯದ ಮುಖ್ಯ ಶಿಖರದ ಲಕ್ಷಣವನ್ನು ಹೊಂದಿದೆ.

**ಶಿಖರ**

ದೇವಾಲಯದ ಶಿಖರವು ಸೋಪುಗಲ್ಲಿನಿಂದ ಕಟ್ಟಲಾಗಿದ್ದು ಇದು ಒಂದು ರೀತಿಯಲ್ಲಿ ದ್ರಾವಿಡ ಮತ್ತು ನಾಗರ ಶೈಲಿಯನ್ನು ಹೊಂದಿದೆ. (ಚಿತ್ರ – 52) ಶಿಖರವು ಮೂರು ಹಂತಗಳಲ್ಲಿ ಸಣ್ಣದಾದ ಶಿಖರಗಳನ್ನು ಹೊಂದಿದ್ದು ಇದರ ಪ್ರತಿಯೊಂದು ಹೊರಚಾಚುವಿನಲ್ಲಿ ಒಂದೊಂದು ವಿಮಾನವನ್ನು ರಚಿಸಲಾಗಿದೆ. ಪ್ರತಿವಿಮಾನದ ಎರಡು ಬದಿಯಲ್ಲಿಯೂ ಸಹ ಊರ್ಧ್ವಮುಖದ ಲತಾಪಟ್ಟಿಕೆಯನ್ನು ಹೊಂದಿದೆ. ಪ್ರತಿಯೊಂದು ವಿಮಾನವನ್ನು ಪ್ರತ್ಯೇಕವಾಗಿ ಅಲಂಕರಿಸಿರುವುದರಿಂದ ಶಿಖರದ ಲಕ್ಷಣವು ಅದ್ಭುತವಾಗಿ ಕಂಡುಬರುತ್ತದೆ. ಮೂರು ಹಂತದ

ಶಿಖರದ ಕೊನೆಯ ಭಾಗದಲ್ಲಿ ಅಮಲಕದ ರೀತಿಯ ಸ್ತೂಪಿಯಿದ್ದು ಇದು ಸಹ ಶಿಖರದ ಒಳ ಹಾಗೂ ಹೊರಚಾಚುವಿಗೆ ಅನುಗುಣವಾಗಿ ದಪ್ಪನಾಗಿ ನಿರ್ಮಿಸಲಾಗಿದೆ. ಈ ಅಮಲಕದ ಮೇಲೆ ನಾಲ್ಕು ಮೂಲೆಗಳಲ್ಲಿಯೂ ಸಹ ಶಿವನ ವಾಹನವಾದ ನಂದಿಯ ಶಿಲ್ಪವಿದೆ. ನಂತರದಲ್ಲಿ ಪದ್ಮದ ಅಲಂಕರಣೆಯಿದ್ದು ಅದರ ಮೇಲ್ಭಾಗದಲ್ಲಿ ಕಲಶವಿದೆ. ಶಿಖರದ ಮುಂಭಾಗದಲ್ಲಿ ಶುಕನಾಸವಿದ್ದು ಇದು ಶಿಖರದ ಮೂರನೆ ಹಂತದ ಸಮಕ್ಕೆ ಇದೆ. ಇಲ್ಲಿ ಹೊಯ್ಸಳ ಲಾಂಛನವಾದ ಸಳನು ಹುಲಿಯನ್ನು ಕೊಲ್ಲುತ್ತಿರುವ ಶಿಲ್ಪವಿದೆ. ಇದರ ಮುಂಭಾಗದಲ್ಲಿ ಶಿವನ ನೃತ್ಯತಾಂಡವ ಶಿಲ್ಪವಿದ್ದು ಇದನ್ನು ವ್ಯಾಳ ಮುಖದಿಂದ ಹರಡಿರುವ ಲತಾಬಳ್ಳಿಗಳ ಅಲಂಕರಣದ ಮಧ್ಯದಲ್ಲಿ ಅಲಂಕರಿಸಿದೆ.

**ಗರ್ಭಗೃಹ**

ಗರ್ಭಗೃಹದಲ್ಲಿ ಸುಮಾರು ಎರಡು ಅಡಿ ಎತ್ತರದ ಪಾಣಿಪೀಠದ ಮೇಲೆ ಒಂದು ಅಡಿ ಎತ್ತರದ ಲಿಂಗವಿದೆ. ಇಲ್ಲಿಯ ನಾಲ್ಕು ಮೂಲೆ ಕಂಭಗಳು ಭಿತ್ತಿಗೆ ಹೊಂದಿಕೊಂಡಿದ್ದು ಹೊಯ್ಸಳ ಮಾದರಿಯ ನಕ್ಷತ್ರಾಕಾರದ ಕಂಭಗಳಾಗಿವೆ. ಇಲ್ಲಿಯ ಭುವನೇಶ್ವರಿಯು ಪದ್ಮದ ರಚನೆಯನ್ನು ಹೊಂದಿದೆ. ಇಲ್ಲಿಯ ದ್ವಾರಬಂಧದ ಎರಡು ಬದಿಯಲ್ಲೂ ಐದು ಶಾಖೆಗಳನ್ನು ಚಿತ್ರಿಸಿದ್ದು ಒಂದು ಶಾಖೆಯಲ್ಲಿ ಅರೆಕಂಬವನ್ನು ಉಳಿದ ಪಟ್ಟಿಕೆಗಳಲ್ಲಿ ಲತಾಸುರುಳಿಯ ಅಲಂಕರಣವಿದೆ. ಲಲಾಟಬಿಂಬದಲ್ಲಿ ಲಕ್ಷ್ಮಿಯನ್ನು ಚಿತ್ರಿಸಿದ್ದು ಅದರ ಮೇಲ್ಭಾಗದಲ್ಲಿ ಪಾರ್ವತಿಯ ಶಿಲ್ಪವಿದೆ. ದ್ವಾರದ ಇಕ್ಕೆಲಗಳಲ್ಲಿ ಶೈವದ್ವಾರಪಾಲಕರನ್ನು ಚಿತ್ರಿಸಿದ್ದಾರೆ.

**ಸುಖನಾಸಿ**

ಸುಖನಾಸಿಯು ಗರ್ಭಗೃಹದಷ್ಟೇ ವಿಸ್ತೀರ್ಣವನ್ನು ಹೊಂದಿದ್ದು ನಾಲ್ಕು ಮೂಲೆಯಲ್ಲೂ ಸಹ ಭಿತ್ತಿಗೆ ಹೊಂದಿಕೊಂಡತಿದ್ದು ಅಲಂಕಾರಿಕವಾಗಿದೆ. ಎರಡು ಬದಿಯಲ್ಲೂ ಸಹ ಎರಡು ಅಡಿ ಎತ್ತರದ ಜಗತಿ ಇದೆ. ಇಲ್ಲಿ ಉತ್ಸವಮೂರ್ತಿಯನ್ನು ಇಟ್ಟಿದ್ದಾರೆ. ಇಲ್ಲಿಯ ದ್ವಾರಬಂಧದ ಎರಡು ಬದಿಯಲ್ಲು ಐದು ಶಾಖೆಗಳನ್ನು ಚಿತ್ರಿಸಿದ್ದು ಒಂದು ಶಾಖೆಯಲ್ಲಿ ಅರೆಕಂಬವನ್ನು ಮತ್ತೊಂದರಲ್ಲಿ ಸಣ್ಣದಾದ ಜಾಲಂಧ್ರ ರೀತಿಯ ಕಿಂಡಿಗಳನ್ನು ಮಾಡಲಾಗಿದೆ. ಉಳಿದ ಮೂರರಲ್ಲಿ ಲತಾಸುರುಳಿಯ ಅಲಂಕರಣವಿದೆ. ಲಲಾಟಬಿಂಬದಲ್ಲಿ ನಾಟ್ಯಗಣಪತಿಯ ಶಿಲ್ಪವಿದೆ. ಮೇಲ್ಬಾಗದಲ್ಲಿ ಸರಸ್ವತಿಯ ಶಿಲ್ಪವಿದ್ದು ಅಕ್ಕ ಪಕ್ಕದಲ್ಲಿ ಚಾಮರಧಾರಿಣಿಯರನ್ನು ಚಿತ್ರಿಸಲಾಗಿದೆ. ಎರಡು ಬದಿಯಲ್ಲಿ ವ್ಯಾಳದ ರಚನೆಯಿದ್ದು ವ್ಯಾಳದ ಮೇಲೆ ಉಪದೇವತೆಗಳ ಶಿಲ್ಪಗಳನ್ನು ಕೆತ್ತಲಾಗಿದ್ದು ವ್ಯಾಳದ ಸುತ್ತಲು ಅಲಂಕರಿಸಲಾಗಿದೆ. ದ್ವಾರದ ಕೆಳಭಾಗದ ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರನ್ನು ಕೆತ್ತಲಾಗಿದೆ.

## ನವರಂಗ

ನವರಂಗಕ್ಕೆ ಎರಡು ದ್ವಾರಗಳಿದ್ದು ಮುಖ್ಯ ದ್ವಾರವು ದಕ್ಷಿಣ ಭಾಗಕ್ಕಿದೆ. ಪೂರ್ವ ದ್ವಾರವು ನಂದಿ ಮಂಟಪಕ್ಕೆ ಸಂಪರ್ಕವನ್ನು ಕಲ್ಪಿಸುವುದಾಗಿದೆ. ಇದು ಒಂಭತ್ತು ಅಂಕಣಗಳನ್ನು ಹೊಂದಿದೆ. ನವರಂಗದ ಮಧ್ಯಭಾಗದಲ್ಲಿ ಸುಮಾರು ಅರ್ಧ ಅಡಿ ಎತ್ತರದ ಚೌಕಾಕಾರದ ಡಯಾಸ್ ಇದೆ. ಮಧ್ಯಭಾಗದಲ್ಲಿ ನಾಲ್ಕು ಸ್ವತಂತ್ರ ಕಂಭಗಳಿದ್ದು ಇವುಗಳ ಕೆಳಭಾಗವು ಪೀಠದ ಮೇಲೆ ಚೌಕಾಕಾರವಾಗಿದ್ದು ನಂತರದಲ್ಲಿ ದುಂಡಾಗಿದ್ದು ಹಲವಾರು ಒಳ ಹೊರಚಾಚಿದ ಬಳೆಯಾಕಾರದಲ್ಲಿದ್ದು ಕೆಳಮುಖ ಬೋದಿಗೆ ರೀತಿಯಲ್ಲಿವೆ. ಮೇಲ್ಭಾಗದಲ್ಲಿ ಮುಚ್ಚಳ, ಚೌಕಾದ ಪಲಗೈ ಅಬ್ಯಾಕಸ್, ಹಾಗೂ ತೊಲೆಗಳ ಕೆಳಗೆ ಚಾಚುಪೀಠಗಳನ್ನು ಹೊಂದಿವೆ. ಪ್ರತಿ ತೊಲೆಗಳ ಮಧ್ಯಭಾಗದ ಕೆಳಭಾಗದಲ್ಲಿ ಪದ್ಮದ ಚಿತ್ರವನ್ನು ಕೆತ್ತಿದ್ದಾರೆ. ಭಿತ್ತಿಗೆ ಹೊಂದಿಕೊಂಡಂತೆ ಒಟ್ಟು ಹದಿನಾಲ್ಕು ಕಂಭಗಳಿವೆ. ಇವುಗಳು ಸಹ ಹೊಯ್ಸಳ ಕಾಲದ ಲಕ್ಷಣಗಳನ್ನು ಹೊಂದಿದ್ದು ನಕ್ಷತ್ರಾಕಾರದ ರಚನೆಯನ್ನು ಹೊಂದಿವೆ. ಇವುಗಳು ಒಳ ಮುಖಗಳಲ್ಲಿ ಮಾತ್ರ ಅಲಂಕರಣವನ್ನು ಹೊಂದಿದ್ದು ಭಿತ್ತಿಗೆ ಹೊಂದಿಕೊಂಡಂತ್ತಿರುವ ಭಾಗವು ಅಲಂಕರಣವನ್ನು ಹೊಂದಿಲ್ಲ.

ನವರಂಗದಲ್ಲಿ ಬಿಡಿ ಶಿಲ್ಪಗಳಿದ್ದು ಇವುಗಳು ಸಹ ಹೊಯ್ಸಳರ ಕಾಲದ ಲಕ್ಷಣಗಳನ್ನು ಹೊಂದಿವೆ. ಇಲ್ಲಿ ಗಣಪತಿ, ಸಪ್ತಮಾತೃಕೆಯರು, ಮಹಿಷಮರ್ಧಿನಿ, ಸುಬ್ರಹ್ಮಣ್ಯ, ಸೂರ್ಯ ಮತ್ತು ಕುಳಿತ ಭಂಗಿಯಲ್ಲಿರುವ ವೀರಭದ್ರನ ಶಿಲ್ಪವಿದೆ.

ಗಣಪತಿಯು ನಾಲ್ಕು ಕೈಗಳನ್ನು ಹೊಂದಿದ್ದು ಬಲಭಾಗದ ಮೇಲ್‌ಕೈಯಲ್ಲಿ ಕೊಡಲಿ, ಕೆಳಕೈಯಲ್ಲಿ ಅರ್ಧ ದಂತವನ್ನು ಹಿಡಿದಿದ್ದು ಅಭಯ ಹಸ್ತವನ್ನು ಹೊಂದಿದೆ. ಎಡಭಾಗದ ಮೇಲ್‌ಕೈಯಲ್ಲಿ ಗದೆಯಿದ್ದು ಕೆಳಕೈಯಲ್ಲಿ ಮೋದಕ ಪಾತ್ರೆಯನ್ನು ಹಿಡಿದಿದ್ದಾನೆ. ಕೆಳಭಾಗದಲ್ಲಿ ಗಣೇಶನ ವಾಹನವಾದ ಮೂಷಿಕನನ್ನು ಚಿತ್ರಿಸಲಾಗಿದೆ. ಚಿಕ್ಕ ಕಾಲುಗಳು ಮತ್ತು ಚಿಕ್ಕ ಕೈಗಳನ್ನು ಹೊಂದಿದೆ. ಮಹಾಕಾಯ ಎಂಬ ಹೆಸರಿಗೆ ತಕ್ಕಂತೆ ದೊಡ್ಡದಾದ ದುಂಡನೆಯ ಹೊಟ್ಟೆ ನೈಜವಾದ ಸೊಂಡಲಿನಿಂದ ಕೂಡಿದ ಆನೆಯ ಮುಖ, ಅಗಲವಾದ ಕಿವಿಗಳು ಹಾಗೂ ಕೋಣದಂತಹ ಕಿರೀಟಗಳು ಕಂಡುಬರುತ್ತವೆ. ಯಜ್ಞೋಪವೀತ, ಉದರಬಂಧ, ಕೆಯೂರ ಇವುಗಳು ಗಣೇಶನನ್ನು ಅಲಂಕರಿಸಿವೆ. ಇದಕ್ಕೆ ಸುಂದರವಾದ ಪ್ರಭಾವಳಿಯನ್ನು ಕೆತ್ತಲಾಗಿದೆ. ಇದೇ ರೀತಿಯ ಲಕ್ಷಣವನ್ನು ಹೊಂದಿರುವ ಮತ್ತೊಂದು ಗಣಪತಿಯು ದೇವಾಲಯದ ಬಲಭಾಗದಲ್ಲಿರುವ ಅಮ್ಮನವರ ಗುಡಿಯ ಬಲಭಾಗದಲ್ಲಿ ಇಡಲಾಗಿದೆ.

ಸಪ್ತಮಾತೃಕೆಯರಾದ ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ ಮತ್ತು ಚಾಮುಂಡಿ ಇವರುಗಳನ್ನು ಚಿತ್ರಿಸಿದ್ದು ಇವರ ಜೊತೆಯಲ್ಲಿ ಗಣಪತಿ ಮತ್ತು ಭೈರವನನ್ನು ಚಿತ್ರಿಸಿರುತ್ತಾರೆ. (ಚಿತ್ರ – 54) ಸಾಮಾನ್ಯವಾಗಿ ಸ್ತ್ರೀ ದೇವತೆಗಳನ್ನು ಶಕ್ತಿ ದೇವತೆಗಳು ಎಂದು ಕರೆಯುತ್ತಾರೆ.[59] ಇವರುಗಳು ಒಂದೊಂದು ದೇವರ ಶಕ್ತಿ ಎಂದು ಸಹ ಹೇಳುತ್ತಾರೆ. ಒಂದೆ ಪಟ್ಟಿಕೆಗಳಲ್ಲಿ ಇವುಗಳನ್ನು ಚಿತ್ರಿಸಿರುತ್ತಾರೆ. ಒಂದೆ ಪೀಠದಲ್ಲಿ ಬಲಕಾಲನ್ನು ಕೆಳಗೆ ಇಳಬಿಟ್ಟು ಎಡಕಾಲನ್ನು ಮಡಚಿಕೊಂಡು ಕುಳತಂತೆ ಕಂಡುಬಂದರೂ ಸಹ ಅವರವರ ಕೆಳಗೆ ಅವರವರ ಲಾಂಛನಗಳು ಇರುತ್ತದೆ. ಸ್ತ್ರೀಯರ ಬಗೆಗಿನ ವಿಸ್ಮಯ, ಭಯ ಹಾಗೂ ಶ್ರದ್ಧೆಗಳು ಭಕ್ತಿಯ ಭಾವಕ್ಯತೆಯ ಸಂಕೇತವಾಗಿವೆ. ಇಂತಹ ಭಕ್ತಿಯು ಸ್ತ್ರೀಯರ ಮೇಲೆ ಇದ್ದಿತ್ತು, ಆದುದರಿಂದ ಇವರ ರಕ್ಷಣೆಗೆಂದೇ ಗಣಪತಿ, ಭೈರವ, ಸ್ಕಂದ ಇತ್ಯಾದಿ ದೇವತೆಗಳು ಸಪ್ತಮಾತೃಕೆಯರ ಜೊತೆಯಲ್ಲಿ ಇರುತ್ತಿದ್ದರು. ಇವರನ್ನು ಮಾತೃ ದೇವತೆಗಳ ಕುಮಾರರೆಂದೇ ಪುರಾಣಗಳು ತಿಳಸಿವೆ.

ಮಹಿಷಮರ್ಧಿನಿಯ ಶಿಲ್ಪವು ಅಷ್ಠ ಭುಜಗಳನ್ನು ಹೊಂದಿದ್ದಾಳೆ (ಚಿತ್ರ – 59) ಕೈಯಲ್ಲಿ ಖಡ್ಗ, ಬಿಲ್ಲು, ಬಾಣ, ಘಂಟಾ, ಗುರಾಣಿ ಮತ್ತು ಬಟ್ಟಲುಗಳನ್ನು ಹಿಡಿದಿದ್ದಾಳೆ. ಶಿಲ್ಪದ ಕೆಳಗೆ ಕೋಣವನ್ನು ಚಿತ್ರಿಸಿದ್ದು ಕೋಣನ ಮೇಲಿರುವ ರಾಕ್ಷಸನ ತಲೆಯನ್ನು ಒಂದು ಕೈಯಲ್ಲಿ ಹಿಡಿದು ಮತ್ತೊಂದು ಕೈಯಿಂದ ಭರ್ಜಿಯಿಂದ ಅವನ ಎದೆಗೆ ಚುಚ್ಚಿದ್ದಾಳೆ. ಎಡಕಾಲನ್ನು ಮಹಿಷನ ಮೇಲೆ ಇಟ್ಟಿದ್ದಾಳೆ ಇದಕ್ಕೆ ಸುಂದರವಾದ ಪ್ರಭಾವಳಯಿದೆ. ಪೀಠದಲ್ಲಿ ವ್ಯಾಘ್ರದ ಚಿತ್ರವನ್ನು ತೋರಿಸುವುದನ್ನು ಕಾಣಬಹುದು.

ಸುಬ್ರಹ್ಮಣ್ಯನು ಮೂರು ತಲೆಯನ್ನು ಹೊಂದಿದ್ದು ನವಿಲಿನ ಮೇಲೆ ಕುಳತಿದ್ದಾನೆ. (ಚಿತ್ರ – 60) ಇವನು ನಾಲ್ಕು ಕೈಗಳನ್ನು ಹೊಂದಿದ್ದು ಕೈಯಲ್ಲಿ ಭರ್ಜಿ, ಪಾಶ, ಹಾಗೂ ಬಹುಬೀಜ ಫಲವನ್ನು ಹಿಡಿದಿದ್ದಾನೆ. ಬಲಗೈಯನ್ನು ಅಭಯ ಹಸ್ತವನ್ನು ತೋರಿಸಿದ್ದಾನೆ. ನವಿಲಿನ ಬಾಯಲ್ಲಿ ಹಣ್ಣಿನ ಗೊಂಚಲನ್ನು ಚಿತ್ರಿಸಿದ್ದಾನೆ. ನವಿಲು ಮತ್ತು ಸುಬ್ರಹ್ಮಣ್ಯನನ್ನು ಒಂದೇ ಅಳತೆಯಲ್ಲಿ ತೋರಿಸಿದ್ದಾನೆ. ಹಾಗೂ ಸುಬ್ರಹ್ಮಣ್ಯ ಮತ್ತು ನವಿಲನ್ನು ಬಹಳ ಅಲಂಕಾರಿಕವಾಗಿ ಚಿತ್ರಿಸಿದ್ದಾನೆ. ಅಲ್ಲಲ್ಲಿ ಮಣಿಸರಗಳನ್ನು ಚಿತ್ರಿಸಿ ಕಿರೀಟವನ್ನು ಕೆತ್ತಿದ್ದಾನೆ.

ಸೂರ್ಯನು ಸಪ್ತಅಶ್ವಗಳ ಚಿತ್ರವಿರುವ ಪೀಠದ ಮೇಲ್ಭಾಗದಲ್ಲಿ ಸಮಭಂಗದಲ್ಲಿ ನಿಂತಿದ್ದಾನೆ. (ಚಿತ್ರ – 61) ಇವನು ಎರಡು ಕೈಗಳನ್ನು ಹೊಂದಿದ್ದು ಎರಡು ಕೈಗಳಲ್ಲಿ ಪದ್ಮವನ್ನು ಹಿಡಿದಿದ್ದಾನೆ. ಇದಕ್ಕೆ ಸುಂದರವಾದ ಪ್ರಭಾವಳಯಿದ್ದು ಇಕ್ಕೆಲಗಳಲ್ಲಿ ಬಿಲ್ಲು ಬಾಣವನ್ನು ಹಿಡಿದಿರುವ ಉಷೆ ಹಾಗೂ

ಪ್ರತ್ಯುಷೆಯರನ್ನು ಚಿತ್ರಿಸಲಾಗಿದೆ. ಸೂರ್ಯನಿಗೆ ಕಿರೀಟವನ್ನು ಹಾಕಿದ್ದು ಕಂಠಾಭರಣಗಳಿಂದ ಹಾಗೂ ಸೂಕ್ಷ್ಮ ಕೆತ್ತನೆಯಿರುವ ವಸ್ತ್ರದಿಂದ ಅಲಂಕರಿಸಿದ್ದಾನೆ.

ವೀರಭದ್ರನ ಶಿಲ್ಪವು ಚೇಳಿನ ಚಿತ್ರವಿರುವ ಪೀಠದ ಮೇಲಿದೆ. (ಚಿತ್ರ – 58) ಇದು ಕುಳಿತ ಭಂಗಿಯಲ್ಲಿದ್ದು ಬಲಗಾಲನ್ನು ಕೆಳಗೆ ಇಳಿಬಿಟ್ಟು ಎಡಗಾಲನ್ನು ಮಡಿಚಿಕೊಂಡಿದೆ. ಇವನು ನಾಲ್ಕು ಕೈಗಳನ್ನು ಹೊಂದಿದ್ದು ಕೈಗಳಲ್ಲಿ ತ್ರಿಶೂಲ, ಖಡ್ಗ, ಡಮರನ್ನು ಹಿಡಿದಿದ್ದು ಮತ್ತೊಂದು ಕೈಯಲ್ಲಿ ರುಂಡವನ್ನು ಹಿಡಿದಿದ್ದಾನೆ. ವೀರಭದ್ರನನ್ನು ಕಂಠಿಹಾರಗಳಿಂದ ಅಲಂಕರಿಸಲಾಗಿದೆ. ಇದಕ್ಕೆ ಸುಂದರವಾದ ಪ್ರಭಾವಳಿಯನ್ನು ಕೆತ್ತಲಾಗಿದೆ. ಈ ಶಿಲ್ಪವು ಕುಳಿತ ಭಂಗಿಯಲ್ಲಿದ್ದು ಸಾಮಾನ್ಯವಾಗಿ ವೀರಭದ್ರನ ಶಿಲ್ಪವು ನಿಂತ ಭಂಗಿಯಲ್ಲಿರುತ್ತದೆ, ಆದರೆ ಇಲ್ಲಿ ಕುಳಿತಭಂಗಿಯಲ್ಲಿರುವುದು ಒಂದು ವಿಶೇಷ ಎನ್ನಬಹುದು. ಹಾಗೂ ಇಂತಹ ಶಿಲ್ಪಗಳು ದೊರೆಯುವುದು ಬಹಳ ವಿರಳ ಎಂದು ಹೇಳಬಹುದು. ಮೇಲೆ ತಿಳಿಸಿದ ಶಿಲ್ಪಗಳಲ್ಲದೆ ಇಲ್ಲಿ ಎರಡು ನಾಗರ ಕಲ್ಲುಗಳನ್ನು ಸಹ ಇಲ್ಲಿ ಇಡಲಾಗಿದೆ.

ನವರಂಗವು ಒಂಭತ್ತು ಅಂಕಣವಿದ್ದು ಪ್ರತಿಯೊಂದು ಅಂಕಣವು ಸಹ ಒಂದೊಂದು ರೀತಿಯ ಅಲಂಕರಣವನ್ನು ಹೊಂದಿದೆ. ಮಧ್ಯದ ಭುವನೇಶ್ವರಿಯ ಮಧ್ಯದಲ್ಲಿ ನೃತ್ಯತಾಂಡವ ಶಿವನಿದ್ದಾನೆ. ಸುತ್ತಲೂ ಆಯಾ ದಿಕ್ಕಿಗೆ ಅನುಗುಣವಾಗಿ ಅಷ್ಟ ದಿಕ್ಪಾಲಕರನ್ನು ಚಿತ್ರಿಸಲಾಗಿದೆ. ನಂತರದ ಭುವನೇಶ್ವರಿಗಳನ್ನು ದಕ್ಷಿಣ ಭಾಗದಿಂದ ಗಡಿಯಾರದ ಮುಳ್ಳು ಚಲಿಸುವಂತೆ ವಿವರಿಸಲಾಗಿದೆ. ಎರಡನೇ ಭುವನೇಶ್ವರಿಯಲ್ಲಿ ಅಂದರೆ ಶುಕನಾಸಿಯ ಮುಂಭಾಗದ ಅಂಕಣದಲ್ಲಿರುವ ಭುವನೇಶ್ವರಿಯಲ್ಲಿ ಹದಿನಾರು ಕೋನಗಳುಳ್ಳ ನಕ್ಷತ್ರಾಕಾರದ ವೃತ್ತಗಳು ಮತ್ತು ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಸುತ್ತಲೂ ಕೆತ್ತಲಾಗಿದೆ. ಮೂರನೇಯ ಭುವನೇಶ್ವರಿಯು ಶ್ರೀ ಚಕ್ರ ಮಾದರಿಯಲ್ಲಿದ್ದು ಅಷ್ಟದಿಕ್ಪಾಲಕರ ಶಿಲ್ಪವನ್ನು ಕೆತ್ತಲಾಗಿದೆ. ನಾಲ್ಕನೇಯ ಭುವನೇಶ್ವರಿಯೂ ಸಹ ಪದ್ಮದ ಅಲಂಕರಣೆಯನ್ನು ಹೊಂದಿದ್ದು ಇವುಗಳಲ್ಲಿಯು ಸಹ ನಕ್ಷತ್ರಾಕಾರದ ತಳಭಾಗವನ್ನು ಹೊಂದಿದೆ. (ಚಿತ್ರ – 62) ಐದನೆಯ ಭುವನೇಶ್ವರಿಯು ಚೌಕಾಕಾರವಾದ ಒಂಬತ್ತು ಪಟ್ಟಿಕೆಗಳನ್ನು ಹೊಂದಿದ್ದು ಮಧ್ಯದಲ್ಲಿ ಶಿವನನ್ನು ಉಳಿದ ಭಾಗಗಳಲ್ಲಿ ಆಯಾ ದಿಕ್ಕಿಗೆ ಅನುಗುಣವಾಗಿ ಅಷ್ಟದಿಕ್ಪಾಲಕರನ್ನು ಚಿತ್ರಿಸಿದ್ದಾರೆ. ಇಲ್ಲಿ ಅಷ್ಟದಿಕ್ಪಾಲಕರನ್ನು ಸಣ್ಣದಾಗಿ ಚಿತ್ರಿಸಿದ್ದು ಅವರ ವಾಹನಗಳನ್ನು ದಪ್ಪನಾಗಿ ಚಿತ್ರಿಸಲಾಗಿದೆ. ಆರನೆಯ ಭುವನೇಶ್ವರಿಯ ಕೆಳಭಾಗವು ನಕ್ಷತ್ರಾಕಾರವನ್ನು ಹೊಂದಿದ್ದು ಒಳ ಭಾಗದಲ್ಲಿ ವೃತ್ತಾಕಾರವನ್ನು ಹೊಂದಿದೆ. ಮಧ್ಯಭಾಗದಲ್ಲಿ ಪದ್ಮಮಂಡಲ ವಿತಾನವನ್ನು ಹೊಂದಿದೆ. ಏಳನೆಯ ಭುವನೇಶ್ವರಿಯು ಪದ್ಮ ಮಂಡಲ

ವಿತಾನವನ್ನು ಹೊಂದಿದ್ದು ಕೆಳಭಾಗವು ನಕ್ಷತ್ರಾಕಾರವನ್ನು ಹೊಂದಿದ್ದು ಒಳ ಭಾಗದಲ್ಲಿ ಅಷ್ಟ ಮುಖಗಳನ್ನು ಹೊಂದಿರುವ ವೃತ್ತವನ್ನು ಹೊಂದಿದೆ. (ಚಿತ್ರ – 63) ಎಂಟು ಮತ್ತು ಒಂಭತ್ತನೆಯ ಭುವನೇಶ್ವರಿಯು ವೃತ್ತ ಮತ್ತು ಚೌಕಾಕಾರದ ಒಳ ವಿನ್ಯಾಸಗಳನ್ನು ಹೊಂದಿದ್ದು ಮಧ್ಯದಲ್ಲಿ ಇಳಿ ಬಿಟ್ಟ ಕಮಲದ ಮೊಗ್ಗನ್ನು ಚಿತ್ರಿಸಲಾಗಿದೆ.

**ನಂದಿ ಮಂಟಪ**

ನಂದಿ ಮಂಟಪವು ದೇವಾಲಯ ನಿರ್ಮಾಣವಾದ ಕಾಲದಲ್ಲಿಯೇ ನಿರ್ಮಾಣವಾಗಿದ್ದು ಕೆಲವು ಭಾಗಗಳು ಮಾತ್ರ ಜೀರ್ಣೋದ್ಧಾರವಾಗಿವೆ. ಮಧ್ಯದಲ್ಲಿ ಸುಮಾರು ನಾಲ್ಕು ಅಡಿ ಎತ್ತರದ ನಂದಿಯ ಶಿಲ್ಪವಿದೆ. ಇದನ್ನು ಸುಂದರವಾಗಿ ಅಲಂಕರಿಸಲಾಗಿದೆ. ಇದನ್ನು ಗರ್ಭಗುಡಿಯಲ್ಲಿರುವ ಲಿಂಗಕ್ಕೆ ಎದುರಾಗಿ ಇಡಲಾಗಿದೆ. ಇಲ್ಲಿಯ ದ್ವಾರಬಂಧವು ಸಹ ಅಲಂಕರಣವಾಗಿದ್ದು ಐದು ಅಲಂಕರಣ ಪಟ್ಟಿಕೆಯಿಂದ ಕೂಡಿದೆ. ಒಂದರಲ್ಲಿ ಅರೆಕಂಭಗಳನ್ನು ಚಿತ್ರಿಸಿದ್ದು ಮತ್ತೇರಡರಲ್ಲಿ ಸಣ್ಣದಾದ ಜಾಲಂಧ್ರವನ್ನು ಊರ್ಧ್ವಮುಖವಾಗಿ ಕೆತ್ತಲಾಗಿದೆ. (ಚಿತ್ರ – 53) ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವನ್ನು ಸುಂದರವಾಗಿ ಮೂಡಿಸಿದ್ದಾರೆ. ನಂದಿ ಮಂಟಪದಿಂದ ನವರಂಗಕ್ಕೆ ಪ್ರವೇಶ ದ್ವಾರವಿದ್ದು ಇಲ್ಲಿಯೂ ಸಹ ಸುಖನಾಸಿಯ ರೀತಿಯಲ್ಲಿ ಚಿಕ್ಕದಾದ ಒಂದು ಅಂಕಣವಿದೆ. ನವರಂಗಕ್ಕಿರುವ ದ್ವಾರಬಂಧವು ಏಳು ಅಲಂಕರಣ ಪಟ್ಟಿಕೆಯನ್ನು ಹೊಂದಿದ್ದು ಒಂದರಲ್ಲಿ ಅರೆಕಂಭಗಳನ್ನು ಚಿತ್ರಿಸಲಾಗಿದೆ. ಉಳಿದವುಗಳನ್ನು ಹೂ ಬಳ್ಳಿಗಳಿಂದ ಅಲಂಕರಿಸಿದ್ದಾರೆ. ಲಲಾಟ ಬಿಂಬದಲ್ಲಿ ಉಮಾಮಹೇಶ್ವರರು ಸುಖಾಸನದಲ್ಲಿ ಕುಳಿತಿದ್ದಾರೆ. ಕೆಳಭಾಗದಲ್ಲಿ ಶೈವ ದ್ವಾರಪಾಲಕರನ್ನು ಚಿತ್ರಿಸಿದ್ದಾರೆ. ದ್ವಾರಪಾಲಕರನ್ನು ಹೆಚ್ಚಿನ ಅಲಂಕಾರದಿಂದ ಮಾಡಲಾಗಿದೆ. ಮಂಟಪದ ಸುತ್ತಲೂ ಜಾಲಂಧ್ರಗಳನ್ನು ಹೊಂದಿದೆ. ಜಾಲಂಧ್ರಗಳಿಗೆ ಹೊಂದಿಕೊಂಡಂತೆ ಕಂಭಗಳಿದ್ದು ಇವುಗಳಿಗೆ ಹೊಂದಿಕೊಂಡಂತೆ ಕಕ್ಷಾಸನವು ಇದೆ. ಬಹುಶಃ ನಂತರದ ಕಾಲದಲ್ಲಿ ಇದು ಸೇರ್ಪಡೆಯಾಗಿರಬಹುದು. ಈ ರೀತಿಯ ನಂದಿ ಮಂಟಪಗಳು ಬಸರಾಳು ಹಾಗೂ ಅರಸೀಕೆರೆಯ ದೇವಾಲಯಗಳಲ್ಲಿ ಕಾಣಬಹುದು.[60]

ಮೂಲ ದೇವಾಲಯದ ಮುಖ್ಯದ್ವಾರವು ದಕ್ಷಿಣಕ್ಕಿದೆ. ಇಲ್ಲಿನ ದ್ವಾರಬಂಧದಲ್ಲಿ ಐದು ಶಾಖೆಗಳಿದ್ದು ಇವುಗಳಲ್ಲಿ ಒಂದನ್ನು ಅರೆಕಂಭಗಳಿಂದ ಚಿತ್ರಿಸಲಾಗಿದ್ದು ಉಳಿದವುಗಳನ್ನು ಲತಾ ಬಳ್ಳಿಗಳಿಂದ ಅಲಂಕರಿಸಲಾಗಿದೆ. ದ್ವಾರದ ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರ ಚಿತ್ರಗಳಿವೆ. ಮುಂಭಾಗದಲ್ಲಿ ಹೊಯ್ಸಳರ ಕಾಲದ 32 ಅಲಗುಗಳಿಂದ ಚಿತ್ರಿತವಾಗಿರುವ ಎರಡು ಕಂಭಗಳಿದ್ದು ಇಲ್ಲಿ ಮಂಟಪದ ರಚನೆಯನ್ನು ಮಾಡಿದ್ದಾರೆ. ಇದರ ಭುವನೇಶ್ವರಿಯಲ್ಲಿ ಪದ್ಮಮಂಡಲ

ವಿತಾನವನ್ನು ಕೆತ್ತಲಾಗಿದೆ. ಭುವನೇಶ್ವರಿಯ ಉತ್ತರ ಭಾಗದ ಕೆಳಪಟ್ಟಿಕೆಯಲ್ಲಿ ಹಾಗೂ ದೇವಾಲಯದ ಬಲಭಾಗದ ಭಿತ್ತಿಯಲ್ಲಿ ಶಾಸನವನ್ನು ಕೆತ್ತಲಾಗಿದೆ.

ದೇವಾಲಯದ ಮೂಲ ಭಾಗವನ್ನು ಹೊಯ್ಸಳರ ಕಾಲದಲ್ಲಿ ನಿರ್ಮಾಣ ಮಾಡಲಾಗಿದ್ದು ಇನ್ನುಳಿದಂತಹ ಭಾಗವನ್ನು ವಿಜಯನಗರದ ಕಾಲದಲ್ಲಿ ನಿರ್ಮಿಸಲಾಗಿದೆ. ದೇವಾಲಯದ ನೈರುತ್ಯ ಭಾಗದಲ್ಲಿ ಪಾರ್ವತಿಯ ಗುಡಿಯಿದೆ. ಇಲ್ಲಿ ಚತುರ್ಭುಜೆಯಾದ ಪಾರ್ವತಿಯ ಶಿಲ್ಪವಿದೆ. ಸಾಮಾನ್ಯವಾಗಿ ಸ್ತ್ರಿ ದೇವತೆಗಳಿಗೆ ಹೊಯ್ಸಳರ ಕಾಲದಲ್ಲಿ ಪ್ರತ್ಯೇಕವಾಗಿ ಗುಡಿಯನ್ನು ಕಟ್ಟುವ ಪದ್ಧತಿ ಇರಲಿಲ್ಲ. ಇದು ವಿಜಯನಗರ ಕಾಲದಲ್ಲಿ ರೂಢಿಯಲ್ಲಿದ್ದಿತು. ದೇವಾಲಯದ ಮುಂಭಾಗದಲ್ಲಿ ಪಾತಾಳಂಕಣವಿದ್ದು ಇಲ್ಲಿ ಹದಿನಾರು ಸ್ವತಂತ್ರ ಕಂಭಗಳಿವೆ. ಇಲ್ಲಿ ಎರಡು ಕಂಭಗಳು ವಿಶೇಷವಾಗಿದ್ದು ಇವುಗಳು ವಿಜಯನಗರ ಕಾಲದ ಲಕ್ಷಣಗಳನ್ನು ಹೊಂದಿವೆ. ಈ ಎರಡು ಕಂಭಗಳು ನಾಲ್ಕು ಮೂಲೆಗಳಲ್ಲೂ ಉಪಕಂಭಗಳನ್ನು ಹೊಂದಿವೆ. ಇಲ್ಲಿ ದೇವಾಲಯಕ್ಕೆ ಹೋಗಲು ಸೋಪಾನವಿದ್ದು ಎರಡು ಬದಿಯಲ್ಲೂ ಹೊಯ್ಸಳರ ಕಾಲದ ಎರಡು ಗಜಗಳ ಬಿಡಿ ಶಿಲ್ಪಗಳಿವೆ. (ಚಿತ್ರ – 55, 56) ಇವುಗಳನ್ನು ಸೋಪುಗಲ್ಲಿನಿಂದ ಮಾಡಲಾಗಿದ್ದು, ಮೂಲ ದೇವಾಲಯದ ಮುಂದಿದ್ದ ಇವುಗಳನ್ನು ತಂದು ಇಲ್ಲಿ ಇಡಲಾಗಿದೆ. ದೇವಾಲಯಕ್ಕೆ ಮುಖ್ಯದ್ವಾರ ಮಂಟಪವಿದ್ದು (ಚಿತ್ರ – 50) ಇದು ವಿಜಯನಗರದ ಕಾಲದಲ್ಲಿ ಕಟ್ಟಲಾಗಿದೆ. ಇದನ್ನು ಒರಟು ಗ್ರಾನೈಟ್ ಶಿಲೆಯಿಂದ ಕಟ್ಟಲಾಗಿದ್ದು ಸುಮಾರು 6 ಅಡಿ ಎತ್ತರದ ಒಳಜಗತಿಯನ್ನು ಹೊಂದಿದೆ. ಇಲ್ಲಿಯ ಕಂಭಗಳ ಮೇಲೆ ವಿವಿಧ ಮಾದರಿಯ ಉಬ್ಬುಶಿಲ್ಪಗಳಿವೆ. ಮೇಲ್ಭಾಗದ ಚಪ್ಪಡಿಯಲ್ಲಿ ಹುಲಿಯು ಹಸುವನ್ನು ಕೊಂದಿರುವುದು ಹಾಗೂ ಸೂರ್ಯ ಮತ್ತು ಅದರ ಪಕ್ಕದಲ್ಲಿ ಸರ್ಪವನ್ನು ಕೆತ್ತಲಾಗಿದೆ. ಬಹುಶಃ ಇದು ಸೂರ್ಯಗ್ರಹಣವನ್ನು ತೋರಿಸುವ ಶಿಲ್ಪವಾಗಿದೆ. ಏಕೆಂದರೆ ಪ್ರಾಚೀನ ಕಾಲದಲ್ಲಿ ಸೂರ್ಯಗ್ರಹಣ ಮತ್ತು ಚಂದ್ರಗ್ರಹಣದ ಪರಿಕಲ್ಪನೆಯು ಸೂರ್ಯ, ಚಂದ್ರರನ್ನು ಹಾವು ನುಂಗುತ್ತದೆ ಎಂದು ನಂಬಲಾಗಿತ್ತು. ದೇವಾಲಯದ ಮುಂಭಾಗದಲ್ಲಿ ಸುಮಾರು 5 ಅಡಿ ಎತ್ತರದ ಶೈವ ದ್ವಾರಪಾಲಕರ ಬಿಡಿ ಶಿಲ್ಪಗಳಿವೆ. ಇವುಗಳನ್ನು ಒರಟು ಗ್ರಾನೈಟ್ ಶಿಲೆಯಿಂದ ಮಾಡಲಾಗಿದೆ.

**ಚಂದ್ರಮೌಳೇಶ್ವರ ದೇವಾಲಯ**

ಈ ದೇವಾಲಯವು ಸದಾಶಿವ ದೇವಾಲಯದ ಆಗ್ನೇಯ ದಿಕ್ಕಿನಲ್ಲಿ ಹಳೆಯ ಪುಷ್ಕರಿಣಿ(ಕೊಳ)ಯ ದಡದಲ್ಲಿದೆ. ಇದು ಪೂರ್ವಾಭಿಮುಖವಾಗಿದ್ದು ದೇವಾಲಯದ ಹಲವು ಭಾಗಗಳು ಶಿಥಿಲವಾಗಿದೆ. ಇದು ದ್ವಿಕೂಟಚಲಾ ದೇವಾಲಯವಾಗಿದೆ. ಇದನ್ನು ಸಂಪೂರ್ಣವಾಗಿ ಸೋಪುಗಲ್ಲಿನಿಂದ ಕಟ್ಟಲಾಗಿದೆ. ಇದರ ಮೂಲಭಿತ್ತಿಯು ಶಿಥಿಲವಾಗಿದ್ದು ಇತ್ತೀಚೆಗೆ ಇಟ್ಟಿಗೆ ಮತ್ತು

ಗಾರೆಯಿಂದ ಕಟ್ಟಲಾಗಿದ್ದು ಅದು ಸಹ ಶಿಥಿಲವಾಗಿದೆ. ಗರ್ಭಗುಡಿಯಲ್ಲಿ ಎರಡು ಅಡಿ ಪೀಠದ ಮೇಲೆ ಅರ್ಧ ಅಡಿ ಎತ್ತರದ ಲಿಂಗವಿದೆ. ಇದಕ್ಕೆ ಹೊಂದಿಕೊಂಡಂತೆ ತೆರೆದ ಶುಕನಾಸಿಯಿದೆ, ಇಲ್ಲಿ ಸುಮಾರು 3 ಅಡಿ ಎತ್ತರದ ಗಣಪತಿ, 2 ಅಡಿ ಎತ್ತರದ ಭೈರವ ಶಿಲ್ಪವಿದೆ. ನವರಂಗದ ಮಧ್ಯಭಾಗದಲ್ಲಿ 2 ಅಡಿ ಎತ್ತರದ ನಂದಿ ಶಿಲ್ಪವಿದೆ. ನವರಂಗದಲ್ಲಿ 5.5 ಅಡಿ ಎತ್ತರದ ಹನ್ನೆರಡು ಸ್ವತಂತ್ರ ಕಂಭಗಳಿವೆ. ಇದು ಒಟ್ಟು ಇಪ್ಪತ್ತು ಅಂಕಣವಿದ್ದು ಪ್ರತಿಯೊಂದು ಅಂಕಣವು ಒಂದೇ ಅಳತೆಯನ್ನು ಹೊಂದಿವೆ. ಇವು ಸುಮಾರು 5 ಅಡಿ ಉದ್ದ, 5 ಅಡಿ ಅಗಲವನ್ನು ಹೊಂದಿದೆ. ದಕ್ಷಿಣ ಭಾಗದಲ್ಲಿ ಒಂದು ಗರ್ಭಗುಡಿಯಿದ್ದು ಇದರಲ್ಲಿ ಯಾವುದೇ ಶಿಲ್ಪವಿರುವುದಿಲ್ಲ. ಇದಕ್ಕೆ ಹೊಂದಿಕೊಂಡಂತೆ ಗರ್ಭಗುಡಿಯಷ್ಟೆ ಅಳತೆಯ ಸುಖನಾಸಿಯಿದೆ. ನವರಂಗದ ಮಧ್ಯದ ಅಂಕಣದ ಸುತ್ತ ಒಟ್ಟು ಒಂಭತ್ತು ಅಂಕಣದ ಭುವನೇಶ್ವರಿಗಳಲ್ಲಿ ಪದ್ಮದ ಚಿತ್ರವನ್ನು ಕೆತ್ತಿದ್ದಾರೆ. ಎಲ್ಲಾ ಭುವನೇಶ್ವರಿಗಳಲ್ಲಿಯೂ ಸಾಮಾನ್ಯವಾಗಿ ಒಂದೆ ತೆರೆನಾದ ಪದ್ಮದ ಅಲಂಕರಣವನ್ನು ಹೊಂದಿದೆ. ನವರಂಗದ ಉತ್ತರ ಭಾಗದ ಸುಮಾರು ಮೂರು ಅಂಕಣದಷ್ಟು ಛಾವಣಿಯು ಕುಸಿದಿದೆ. ವಾಯುವ್ಯದ ಭಾಗದಲ್ಲಿ ಸುಮಾರು 3 ಅಡಿ ಎತ್ತರದ ಲಿಂಗವಿದೆ. ಇದರ ಪಕ್ಕದಲ್ಲಿ ಹೆಚ್ಚಿನ ಅಲಂಕರಣವಿಲ್ಲದ ಒಂದು ಅಡಿ ಎತ್ತರದ ನಂದಿ ಶಿಲ್ಪವಿದೆ. ದೇವಾಲಯದ ಎರಡು ಗರ್ಭಗುಡಿ ಹಾಗೂ ಸುಖನಾಸಿಗಳ ದ್ವಾರಬಂಧಗಳಲ್ಲಿ ಯಾವುದೆ ಅಲಂಕರಣವಿಲ್ಲದೆ ಸಾಮಾನ್ಯ ಲಕ್ಷಣವನ್ನು ಹೊಂದಿದೆ. ಇಲ್ಲಿ ಯಾವುದೆ ಶಿಲ್ಪಗಳು ಇಲ್ಲದಿದ್ದರೂ ವಾಸ್ತು ರಚನೆಯು ಮಾತ್ರ ಚೆನ್ನಾಗಿದೆ.

ಈ ದೇವಾಲಯವನ್ನು ಯಾವ ಕಾಲದಲ್ಲಿ ಯಾರು ನಿರ್ಮಿಸಿದರು ಎಂಬುದನ್ನು ತಿಳಿಯಲು ಇದಕ್ಕೆ ಸಂಬಂದಿಸಿದ ಶಾಸನಗಳಿಲ್ಲ. ಆದರೆ ಇದರ ವಾಸ್ತು ಲಕ್ಷಣಗಳನ್ನು ಅವಲೋಕಿಸಿದಾಗ ಇದು ಬಹುಶಃ ಪೂರ್ವಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿರಬಹುದು. ದೇವಾಲಯವು ಎತ್ತರದಲ್ಲಿ ಕುಳ್ಳಾಗಿದ್ದು ಹಾಗೂ ನವರಂಗದಲ್ಲಿರುವ ಕಂಭಗಳು ಕೆಳಭಾಗ ಚೌಕಾಕಾರವಾಗಿದ್ದು ಮೇಲ್ಭಾಗವು ದುಂಡಗಿವೆ. (ಚಿತ್ರ – 64) ಯಾವುದೇ ಲಕ್ಷಣಗಳಿಲ್ಲ. ಈ ಎರಡು ವಾಸ್ತು ಲಕ್ಷಣಗಳನ್ನು ಗಂಗರ ಕಾಲದ ವಾಸ್ತುಶೈಲಿಯ ಹೋಲಿಕೆ ಕಂಡುಬಂದರೂ ಸಹ ದೇವಾಲಯದ ನಿರ್ಮಾಣಕ್ಕೆ ಬಳಸಿರುವ ಮಾಧ್ಯಮ ಸೋಪುಗಲ್ಲು. ಆದುದರಿಂದ ಇದು ಪೂರ್ವಹೊಯ್ಸಳರ ಕಾಲದಲ್ಲಿ ನಿರ್ಮಿಸಿರಬಹುದು. ಈ ರೀತಿಯ ಕಂಭಗಳು ಹೊಯ್ಸಳರ ಕಾಲದಲ್ಲಿ ನಿರ್ಮಿತವಾದ ಹಿರೇಮಗಳೂರಿನ ಕೋದಂಡರಾಮ ದೇವಾಲಯದ ಕಂಭಗಳನ್ನು ಹೋಲುತ್ತವೆ. ಆದರೆ ಅವುಗಳು ಗಾತ್ರದಲ್ಲಿ ತುಸು ದಪ್ಪನಾಗಿವೆ. ಬಹುಶಃ ಇಲ್ಲಿ ಆಡಳಿತ ನಡೆಸುತ್ತಿದ್ದ ಹೊಯ್ಸಳರು ಪೂರ್ವ ಭಾಗದಲ್ಲಿ ಅಂದರೆ

ಲಕ್ಷ್ಮಿನರಸಿಂಹ ಮತ್ತು ಸದಾಶಿವ ದೇವಾಲಯವನ್ನು ನಿರ್ಮಿಸುವುದಕ್ಕೂ ಪೂರ್ವದಲ್ಲಿಯೇ ನಿರ್ಮಿಸಲಾಗಿದೆ.


**ಆಕರ ಗ್ರಂಥಗಳು**

1. ಎ.ಕ.ಸಂ–10, ಚ.ಪ – 113
2. ಅದೇ, – 103
3. ಅದೇ, – 113
4. ಎಂ.ಎ.ಆರ್–1933, ಪು.20
5. ಎ.ಕ.ಸಂ–10, ಚ. ಪ – 111
6. ಅದೇ, – 112
7. ಅದೇ, – 103
8. ಎಂ.ಎ.ಆರ್– 1933, ಪು.30
9. ಎಂ.ಎ.ಆರ್ – 1933, ಪು.29
10. ಎಂ.ಎ.ಆರ್ – 1933, ಪು.29
11. ದೇವಾಲಯ ವಾಸ್ತುಶಿಲ್ಪ ಪರಿಚಯ–ಕೂ.ಸ.ಅಪರ್ಣ, ಪು–97
12. ಎಂ.ಎ.ಆರ್–1933, ಪು.29
13. ಎಂ.ಎ.ಆರ್–1933, ಪು.20
14. ಹೊಯ್ಸಳ ವಾಸ್ತು ಶಿಲ್ಪ – ಶ್ರೀಕಂಠಶಾಸ್ತ್ರಿ, ಪು.115
15. ಎಂ.ಎ.ಆರ್–1933, ಪು. 20
16. ಎಂ.ಎ.ಆರ್–1933, ಪು. 20
17. ಬುದ್ಧಿಸ್ಟ್ ಆರ್ಕಿಟೆಕ್ಚರ್ ಆಫ್ ವೆಸ್ಟ್ರನ್ ಇಂಡಿಯಾ – ಎಸ್. ನಾಗರಾಜು, ಪು.83
18. ಎಂ.ಎ.ಆರ್–1933, ಪು.24
19. ಎ.ಕ.ಸಂ–10, ಚ.ಪ– 110.1
20. ಅದೇ, – 110.2
21. ಎಂ.ಎ.ಆರ್–1933, ಪು. 24

22. ಎಂ.ಎ.ಆರ್-1933, ಪು.24

23. ಎ.ಕ.ಸಂ-10, ಚ. ಪ – 110.3

24. ಎಂ.ಎ.ಆರ್-1933, ಪು.24

25. ಎ.ಕ.ಸಂ-10, ಚ. ಪ– 104

26. ಅದೇ, – 110.4

27. ಅದೇ, – 110.5

28. ಅದೇ, – 110.6

29. ಅದೇ, – 110.7

30. ಅದೇ, – 110.8

31. ಅದೇ, – 110.9

32. ಅದೇ, – 105

33. ಅದೇ, – 110.10

34. ಅದೇ, – 110.12

35. ಅದೇ, – 110.13

36. ಅದೇ, – 110.14

37. ಅದೇ, – 106

38. ಅದೇ, – 110.19

39. ಅದೇ, – 110.21

40. ಅದೇ, – 110.26

41. ಅದೇ, – 110.29

42. ಅದೇ, – 110.32

43. ಅದೇ, – 110.27,28,29

44. ಅದೇ, – 110.30

45. ಅದೇ, – 110.31

46. ಅದೇ, – 110.34

47. ಅದೇ, – 110.35

48. ಅದೇ, – 110.36

49. ಅದೇ, – 110.37

50. ಅದೇ, – 110.38

51. ಅದೇ, – 110.39

52. ಅದೇ, – 110.42

53. ಅದೇ, – 110.47

54. ಹೊಯ್ಸಳ ವಾಸ್ತುಶಿಲ್ಪ – ಡಾ.ಎಸ್.ಶ್ರೀಕಂಠಶಾಸ್ತ್ರಿ, ಪು.120

55. ಎಂ.ಎ.ಆರ್– 1933, ಪು. 28

56. ಎ.ಕ.ಸಂ–10, ಚ. ಪ – 113

57. ಎಂ.ಎ.ಆರ್–1933, ಪು.30

58. ಎ.ಕ.ಸಂ–10, ಚ. ಪ – 103

59. ಎ ಡಿಕ್ಷ್‌ನರಿ ಆಪ್ ಹಿಂದು ಆರ್ಕಿಟೆಕ್ಚರ್, ಪಿ.ಕೆ.ಆಚಾರ್ಯ, 1981, ಪು.570

60. ಹೊಯ್ಸಳ ವಾಸ್ತು ಶಿಲ್ಪ – ಶ್ರೀಕಂಠಶಾಸ್ತ್ರಿ, ಪು.123

# ಅಧ್ಯಾಯ – 6

## ಉಪಸಂಹಾರ

ಕಲೆ ಮತ್ತು ವಾಸ್ತು ಶಿಲ್ಪದ ಕೊಡುಗೆಯಲ್ಲಿ ಹೊಯ್ಸಳರು ಬಹಳ ಪ್ರಮುಖರು, ಕರ್ನಾಟಕದಲ್ಲಿ ಬಾದಾಮಿಯ ಮತ್ತು ಕಲ್ಯಾಣ ಚಾಲುಕ್ಯರಿಂದ ರೂಪಿಸಲ್ಪಟ್ಟಿದ್ದ ವಾಸ್ತು ಶೈಲಿಯನ್ನು ಅಳವಡಿಸಿಕೊಂಡು ತಮ್ಮದೇ ಆದ ವಿಶೇಷ ಶೈಲಿಯನ್ನು ರೂಪಿಸಿಕೊಂಡವರು ಹೊಯ್ಸಳರು. ಅವರ ಈ ಶೈಲಿಯು ಹೊಯ್ಸಳ ಶೈಲಿಯೆಂದೆ ಪ್ರತ್ಯೇಕವಾದ ಭಾಗವಾಯಿತು. ಹೊಯ್ಸಳರು ತಮ್ಮ ರಾಜಕೀಯ ಜೀವನದ ಆರಂಭದಿಂದಲೆ ಆಯಾ ಪ್ರದೇಶಕ್ಕನುಗುಣವಾಗಿ ವಿಶಿಷ್ಠ ಕಲಾ ಪರಂಪರೆಯನ್ನು ಹರಡಿದರು. ಇವರುಗಳು ಆಡಳಿತ ಪ್ರಾಂತ್ಯದಲ್ಲೆಲ್ಲಾ ಸಹ ಒಂದಲ್ಲ ಒಂದು ರೀತಿಯಲ್ಲಿ ದೇವಾಲಯವನ್ನು ನಿರ್ಮಿಸಿದ್ದಾರೆ. ಇವರು ಕೇವಲ ಯಾವುದೆ ಒಂದು ಧರ್ಮದ ಕಟ್ಟುಪಾಡಿಗೆ ಒಳಗಾಗದೆ ಸರ್ವಧರ್ಮ ಸಹಿಷ್ಣುಗಳಾಗಿದ್ದರು. ಆದುದರಿಂದಲೆ ಇವರ ಕಾಲದಲ್ಲಿ ವೈಷ್ಣವ, ಶೈವ ಮತ್ತು ಜೈನ ಬಸದಿಗಳ ನಿರ್ಮಾಣವಾದವು. ವೈಷ್ಣವ, ಶೈವ ದೇವಾಲಯಗಳ ಜೊತೆ ಜೊತೆಗೆ ಜೈನಬಸದಿಗಳು ನಿರ್ಮಾಣವಾಗಿರುವುದು ಇವರ ಸರ್ವಧರ್ಮ ಸಹಿಷ್ಣುತೆಗೆ ಸಾಕ್ಷಿಯಾಗಿದೆ.

ಹೊಯ್ಸಳರ ಕಾಲದಲ್ಲಿ ಕರ್ನಾಟಕದಲ್ಲಿ ಅದರಲ್ಲೂ ಮುಖ್ಯವಾಗಿ ದಕ್ಷಿಣ ಕರ್ನಾಟಕದಲ್ಲಿ ಇವರ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳು ಐತಿಹಾಸಿಕವಾಗಿ ಇಂದಿಗೂ ಸಹ ಉಳಿದುಕೊಂಡು ಬಂದಿವೆ. ಸಂಖ್ಯೆಯ ದೃಷ್ಟಿಯಿಂದಲೂ ಉತ್ತಮವಾಗಿದ್ದು ಅಲಂಕರಣೆಯಲ್ಲಿ ಅದ್ಭುತವಾದುದಾಗಿದ್ದು ಗುಣದ ದೃಷ್ಟಿಯಿಂದಲಂತೂ ಅನುಪಮವಾದುವಾಗಿವೆ. ಇದಕ್ಕೆಲ್ಲ ಕಾರಣ ಎಂದರೆ ಅಂದಿನ ಕಾಲದಲ್ಲಿ ಕಲೆಯನ್ನು ಪ್ರೋತ್ಸಾಹಿಸಿದ ಕ್ರಮವಾಗಿದೆ. ಅಂದಿನ ಕಾಲದಲ್ಲಿ ಕೇವಲ ರಾಜ ಮತ್ತು ಅವನ ಕುಟುಂಬವೆ ಎಲ್ಲಾ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಕಾರ್ಯಗಳನ್ನು ಮಾಡುತ್ತಿರಲಿಲ್ಲ. ರಾಜನ ಪರವಾಗಿ ಅವನ ಅಧಿಕಾರಿಗಳಾದ ದಂಡನಾಯಕರುಗಳು ಹಾಗೂ ಇನ್ನೀತರ ಅಧಿಕಾರಿಗಳು ಕೆಲವು ಭಾಗವನ್ನು ನೋಡಿಕೊಂಡು ಅಲ್ಲಲ್ಲಿ ದೇವಾಲಯಗಳನ್ನು ನಿರ್ಮಿಸಲು ಕಾರಣಕರ್ತರಾದರು. ರಾಜನ ಮಾಂಡಲಿಕರು, ಅಧಿಕಾರಿಗಳು ಗ್ರಾಮದ ಮುಖಂಡರುಗಳು ಇನ್ನಿತರ ವರ್ಗದವರು ಎಲ್ಲರೂ ಸಹ ಆಯಾ ಪ್ರಾಂತ್ಯದಲ್ಲಿ ಕಲೆಯ ಪೋಷಕರಾದರು ಹಾಗೂ ರಾಜವಂಶಸ್ಥರಿಂದಲೂ ಸಹ ಇದಕ್ಕೆ ಪೂರಕವಾದ ಬೆಂಬಲ ದೊರೆಯುತ್ತಿತ್ತು. ಆದುದರಿಂದಲೆ ದಕ್ಷಿಣ ಕರ್ನಾಟಕದಲ್ಲೆಲ್ಲಾ ಹೊಯ್ಸಳರ ದೇವಾಲಯಗಳ ನಿರ್ಮಾಣ ಕಾರ್ಯವು ನಡೆಯಿತ್ತು ಎನ್ನಬಹುದು.

ಹೊಯ್ಸಳರು ಕ್ರಿ.ಶ. 11ನೇಯ ಶತಮಾನದಿಂದ 13ನೇಯ ಶತಮಾನಗಳವರೆಗೆ ಕರ್ನಾಟಕದಲ್ಲಿ ಆಡಳಿತ ನಡೆಸಿದರು. ಇವರು ರಾಜಕೀಯವಾಗಿ ಭದ್ರಬುನಾದಿಯನ್ನು ಕಂಡುಕೊಂಡ ಮೇಲೆ ವಾಸ್ತು ಶಿಲ್ಪದ ಬೆಳವಣಿಗೆಯನ್ನು ಉತ್ತುಂಗ ಮಟ್ಟಕ್ಕೆ ಕೊಂಡೊಯ್ದರು. ಪ್ರಾರಂಭದಲ್ಲಿ ಇವರು ಸಾಮಂತ ರಾಜರಾಗಿದ್ದಾಗಲೂ ಸಹ ಕಲೆಯನ್ನು ಪ್ರೋತ್ಸಾಹಿಸುತ್ತಿದ್ದರು. ಆದರೆ ಪ್ರೌಢ ಹಂತದಲ್ಲಿಯೂ ಸಹ ಇವರ ವಾಸ್ತುಗಳು ಇದ್ದು ಇವುಗಳು ಸಹ ಉತ್ತಮ ಗುಣಮಟ್ಟವನ್ನು ಹೊಂದಿದ್ದವು. ಇವುಗಳು ಹೆಚ್ಚಿನ ಸಂಖ್ಯೆಯಲ್ಲಿ ಸರಳವಾದ ಅಲಂಕರಣದೊಂದಿಗೆ ದ್ರಾವಿಡ ಶೈಲಿಯಲ್ಲಿ ನಿರ್ಮಾಣವಾದವು. ಆರಂಭದಲ್ಲಿ ಕೆಲವು ವಿದ್ವಾಂಸರು ಇದನ್ನು ಚಾಳುಕ್ಯ ವಾಸ್ತುಶೈಲಿಯ ಮುಂದುವರಿದ ಒಂದು ಭಾಗವೆಂದು ಹೇಳಿದ್ದುಂಟು. ಇವರು ದಕ್ಷಿಣಭಾರತದಲ್ಲಿ ಆಡಳಿತ ನಡೆಸುತ್ತಿದ್ದಂತಹ ರಾಜಮನೆತನೆಗಳಾದ ಚೋಳರು, ಪಾಂಡ್ಯರು, ಹಾಗೂ ದಕ್ಷಿಣ ಕರ್ನಾಟಕದಲ್ಲಿದ್ದ ಗಂಗರು ರೂಪಿಸಿದ ವಿನ್ಯಾಸ ಮತ್ತು ಚಾಳುಕ್ಯ ಶೈಲಿಯ ಹಲವು ಅಂಶಗಳನ್ನು ಹೊಯ್ಸಳ ಶೈಲಿಯಲ್ಲಿ ಸುಗಮವಾಗಿ ಸಮ್ಮಿಶ್ರಗೊಳಿಸಿರುವುದಲ್ಲದೆ ಇನ್ನೂ ಕೆಲವು ಹೊಸ ಅಂಶಗಳನ್ನು ಅಳವಡಿಸಿಕೊಂಡರು. ಹೊಯ್ಸಳರು ತಮ್ಮ ವಾಸ್ತು ಶೈಲಿಯಲ್ಲಿ ಅದುವರೆವಿಗೂ ಕಾಣದ ಹಲವು ವೈಶಿಷ್ಟ್ಯವಾದ ವಿನ್ಯಾಸಗಳ ನಿರ್ಮಾಪಕರಾದರು. ಹೊಯ್ಸಳರ ಕಾಲದಲ್ಲಿ ನಿರ್ಮಿತವಾದಂತಹ ಪ್ರಮುಖ ದೇವಾಲಯಗಳಾದ ಬೇಲೂರು, ಹಳೆಬೀಡು ಮತ್ತು ಸೋಮನಾಥಪುರದ ದೇವಾಲಯಗಳು ಶಿಲ್ಪ ಕಲೆಯಿಂದ ಬಹು ಆಕರ್ಷಣೀಯವಾದವು. ಇವುಗಳು ಕೇವಲ ಆ ಕಾಲದ ಕಲಾತ್ಮಕ ಚಟುವಟಿಕೆಗಳನ್ನು ಪ್ರತಿಬಿಂಬಿಸುವ ದೇವಾಲಯಗಳಾಗಿರದೆ ಅಂದಿನ ಸಾಮಾಜಿಕ, ಆರ್ಥಿಕ ವ್ಯವಸ್ಥೆಯನ್ನು ಸಹ ಬಿಂಬಿಸುತ್ತವೆ. ಈ ದೇವಾಲಯಗಳಲ್ಲಿ ಹೊಯ್ಸಳರ ಕಾಲದಲ್ಲಿ ಕಂಡುಬರುವಂತಹ ಎಲ್ಲಾ ಅಂಶಗಳನ್ನು ಇಲ್ಲಿ ಸೂಕ್ಷ್ಮವಾಗಿ ಶಿಲ್ಪಿಗಳು ಜನರ ಊಹೆಗೂ ನಿಲುಕದ ರೀತಿಯಲ್ಲಿ ರಚಿಸಿದ್ದಾರೆ.

ಹೊಯ್ಸಳರು ತಮ್ಮ ವಾಸ್ತು ರಚನೆಗೆ ಯಾವುದೇ ಅಂಶಗಳನ್ನು ಬೇರೆಯವರಿಂದ ಪಡೆದರೂ ಸಹ ತಾವು ನಿರ್ಮಿಸಿದ ದೇವಾಲಯಗಳಲ್ಲಿ ಯಾವುದಾದರೊಂದು ವಿಶೇಷತೆಯನ್ನು ಅನುಸರಿಸುತ್ತಲೆ ಬಂದರು. ದೇವಾಲಯದ ತಳವಿನ್ಯಾಸಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿವಿಧ ತಳವಿನ್ಯಾಸಗಳನ್ನು ಹೊಂದಿ, ಅತ್ಯುತ್ತಮ ನಕ್ಷತ್ರಾಕಾರದ ತಲವಿನ್ಯಾಸ, ಜಗತಿಯ ನಿರ್ಮಾಣ, ಕೋಷ್ಠಗಳ ನಿರ್ಮಾಣ, ಭಿತ್ತಿ ಶಿಲ್ಪಗಳು, ವೇಸರ ಶೈಲಿಯ ಶಿಖರಗಳು, ಅಲಂಕಾರಿಕ ಅರೆ ಕಂಭಗಳು, ಸ್ವತಂತ್ರ ಕಂಭಗಳು, ದ್ವಾರಬಂಧಗಳು, ಬಿಡಿಶಿಲ್ಪಗಳು, ಅಲಂಕಾರಿಕ ಭುವನೇಶ್ವರಿಗಳು ಹೀಗೆ ಹತ್ತು ಹಲವಾರು ವಿಷಯಗಳಲ್ಲಿ ತಮ್ಮ ಪ್ರೌಢಿಮೆಯನ್ನು ತೋರಿಸಿದ್ದಾರೆ. ಅಲ್ಲದೇ ಏಕಕೂಟ,

ದ್ವಿಕೂಟ, ತ್ರಿಕೂಟ, ಚತುಷ್ಕೂಟ, ಹಾಗೂ ಪಂಚಕೂಟ ದೇವಾಲಯಗಳು ಮುಂತಾದ ಅಂಶಗಳು ಚಾಲುಕ್ಯೋತ್ತರ ಶೈಲಿಯನ್ನು ಮೂಲವಾಗಿಟ್ಟುಕೊಂಡು ಬೆಳವಣಿಗೆಯನ್ನು ಹೊಂದಿದ್ದವಾಗಿವೆ.

ಈ ಸಂಶೋಧನೆಯಲ್ಲಿ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದಂತಹ ಕಿಕ್ಕೇರಿ ಮತ್ತು ನುಗ್ಗೇಹಳ್ಳಿ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ ಕಲೆಯ ಲಕ್ಷಣಗಳನ್ನು ಕುರಿತು ಈಗಾಗಲೇ ಈ ಗ್ರಂಥದ ಒಳಪುಟಗಳಲ್ಲಿ ಚರ್ಚಿಸಿದ್ದೇವೆ. ಈ ದೇವಾಲಯಗಳು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದರೂ ಸಹ ಕಾಲಘಟ್ಟಗಳು ಮಾತ್ರ ಬೇರೆ ಬೇರೆಯಾಗಿವೆ. ಈ ಎರಡು ಗ್ರಾಮದಲ್ಲಿ ಹೊಯ್ಸಳರ ಆರಂಭಕಾಲದ ವಾಸ್ತುವಿನಿಂದ ಹಿಡಿದು ಉತ್ತುಂಗ ಮಟ್ಟಕ್ಕೇರಿದ ಕಾಲದವರೆಗೂ ಸಹ ಇಲ್ಲಿ ಗಮನಿಸಬಹುದು. ಕಿಕ್ಕೇರಿಯ ಮಲ್ಲೇಶ್ವರ ಹಾಗು ನುಗ್ಗೇಹಳ್ಳಿಯ ಚಂದ್ರಮೌಳೇಶ್ವರ ದೇವಾಲಯಗಳು ಹೊಯ್ಸಳರ ಆರಂಭ ಕಾಲದ ಕೃತಿಯನ್ನು ಹೋಲುವಂತಿದ್ದರೆ. ಕಿಕ್ಕೇರಿಯ ಬ್ರಹ್ಮೇಶ್ವರ, ಜನಾರ್ಧನ, ಲಕ್ಷ್ಮೀನರಸಿಂಹ ಮತ್ತು ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ, ಸದಾಶಿವ ದೇವಾಲಯಗಳು ಹೊಯ್ಸಳರ ಕಾಲದ ಮಧ್ಯಂತರದ ವಾಸ್ತುಕೃತಿಯನ್ನು ಹೋಲುವಂತಾಗಿವೆ. ಚಂದ್ರಮೌಳೇಶ್ವರ ಮತ್ತು ಮಲ್ಲೇಶ್ವರ ದೇವಾಲಯಗಳಲ್ಲಿರುವ ಕಂಭಗಳನ್ನು ಗಮನಿಸಿದಾಗ ಇವುಗಳು ಗಂಗರ ಕಾಲದ ವಾಸ್ತು ರಚನೆಯನ್ನು ಒಳಗೊಂಡಂತಾಗಿವೆ.

ಕಿಕ್ಕೇರಿಯ ಬ್ರಹ್ಮೇಶ್ವರ ದೇವಾಲವು ವಾಸ್ತು ಕೃತಿಯಲ್ಲಿ ಅತ್ಯುತ್ತಮವಾದುದಾಗಿದೆ. ಇದು ಏಕಕೂಟವಾದರೂ ಸಹ ದೇವಾಲಯದ ಹೊರ ವಿನ್ಯಾಸದ ಲಕ್ಷಣಗಳನ್ನು ಸಹ ಹೊಂದಿದೆ. ಇಲ್ಲಿ ಕಂಡುಬರುವ ಭಿತ್ತಿಶಿಲ್ಪಗಳು ಹಾಗೂ ಅವುಗಳ ಮೇಲ್ಭಾಗದಲ್ಲಿ ರಚಿಸಿರುವ ವಿಮಾನದ ಶೈಲಿಗಳು ಭಿತ್ತಿಶಿಲ್ಪಗಳ ಸೌಂದರ್ಯವನ್ನು ಹೆಚ್ಚಿಸಿವೆ. ಅದಿಷ್ಠಾನದಲ್ಲಿ ದಂತಪಂಕ್ತಿಯ ಸಣ್ಣ ದಿಂಡುಗಳಲ್ಲೂ ಸಹ ಶಿಲ್ಪಿಯು ಶಿಲ್ಪದ ರಚನೆಯನ್ನು ಮಾಡಿ ದೇವಾಲಯದ ಅಲಂಕಾರವನ್ನು ತುಸು ಹೆಚ್ಚುವಂತೆ ಮಾಡಿದ್ದಾನೆ. ಒಳಾಂಗಣದ ವಿನ್ಯಾಸವು ಹೆಚ್ಚು ಕಡಿಮೆ ಬೇಲೂರಿನ ಕೇಶವ ದೇವಾಲಯದ ರೀತಿಯ ಲಕ್ಷಣಗಳನ್ನು ಹೊಂದಿದ್ದರೂ ಸಹ ಅದರಷ್ಟು ವಿಶಾಲತೆಯನ್ನು ಹೊಂದಿಲ್ಲದ್ದಾಗಿದೆ. ನವರಂಗದಲ್ಲಿ ಕಂಡುಬರುವ ಗಣೇಶ, ಮಹಿಷಾಮರ್ಧಿನಿ, ಸುಬ್ರಹ್ಮಣ್ಯ, ಚೆನ್ನಕೇಶವ ನಂದಿಮಂಟಪದಲ್ಲಿರುವ ಸೂರ್ಯ ಶಿಲ್ಪಗಳು ಮುಂತಾದವು ಗಳು ಬಹಳ ಅತ್ಯದ್ಭುತವಾಗಿವೆ. ಹಾಗೂ ನವರಂಗದಲ್ಲಿರುವ ಮದನಿಕೆಯರ ಶಿಲ್ಪಗಳಂತೂ ಹೆಚ್ಚು ಅಲಂಕಾರಿಕವಾಗಿದ್ದು ದೇವಾಲಯದ ಒಳಸೌಂದರ್ಯಕ್ಕೆ ಹೆಚ್ಚು ಒತ್ತು ನೀಡುತ್ತವೆ. ದೇವಾಲಯದ ಮುಂಭಾಗದಲ್ಲಿ ನಂದಿಮಂಟಪವಿದ್ದು ಇದು ಸಹ ದೇವಾಲಯದ ಸೌಂದರ್ಯಕ್ಕೆ ಸಾಕ್ಷಿಯಾಗಿದೆ. ಇಲ್ಲಿನ ಜನಾರ್ಧನ ಧೇವಾಲಯವು ಸಹ ಹೊರ ಭಿತ್ತಿಶಿಲ್ಪಗಳೊಂದಿಗೆ ಉತ್ತಮ ಕಲಾಕೃತಿಯಾಗಿದೆ. ಆದರೆ ಇದು

ಶಿಥಿಲವಾಗುತ್ತಿರುವುದು ಬಹಳ ಶೋಚನೀಯ ಸಂಗತಿ. ಈ ಎರಡು ದೇವಾಲಯಗಳ ಹೊರ ಭಿತ್ತಿಶಿಲ್ಪಗಳು ಒಂದೇ ರೀತಿಯ ಲಕ್ಷಣಗಳನ್ನು ಹೊಂದಿದ್ದು ಶಿಲ್ಪಗಳ ಮೇಲೆ ವಿಮಾನದ ರಚನೆ ಹಾಗೂ ಅಲ್ಲಲ್ಲಿ ಕಂಭಗಳ ಮೇಲೆ ವಿಮಾನದ ರಚನೆಯನ್ನು ಗಮನಿಸಿದರೆ ಈ ಎರಡು ದೇವಾಲಯಗಳನ್ನು ಏಕಕಾಲದಲ್ಲಿಯೇ ನಿರ್ಮಿಸಿರಬಹುದು. ಹಾಗೂ ಬ್ರಹ್ಮೇಶ್ವರ ದೇವಾಲಯದಲ್ಲಿ ಕೆಲಸ ಮಾಡಿದ ಶಿಲ್ಪಿಗಳೆ ಇಲ್ಲೂ ಸಹ ಕೆಲಸ ಮಾಡಿರುವ ಸಾಧ್ಯತೆಯನ್ನು ಊಹಿಸಬಹುದು. ಕೆರೆಯ ಪೂರ್ವದಲ್ಲಿರುವ ಬಹಳ ಶಿಥಿಲವಾಗಿರುವ ಮಲ್ಲೇಶ್ವರ ದೇವಾಲಯದ ವಾಸ್ತು ಕೃತಿಯು ಸಹ ಬಹಳ ಕ್ರಮಬದ್ಧವಾದ ಕ್ರಮವನ್ನು ಹೊಂದಿದೆ. ನವರಂಗದ ದಕ್ಷಿಣಭಾಗದ ಒಳಭಿತ್ತಿಯಲ್ಲಿರುವ ಸಪ್ತಮಾತೃಕೆಯರ ಶಿಲ್ಪಗಳನ್ನು ಮಾತ್ರ ಅತ್ಯದ್ಭುತವಾಗಿ ಕೆತ್ತಿದ್ದಾನೆ. ಬ್ರಹ್ಮೇಶ್ವರ ದೇವಾಲಯದ ನಿರ್ಮಾಣದ ಶಿಲ್ಪಿಗಳಾದ ನಕರಾಚಾರಿ, ಮಸಣ, ರೇಖಾವಿಳಾಸ ಹರಿಮಲ್ಲ ಎಂಬುವವರು ಇಲ್ಲಿನ ಶಿಲ್ಪಿಗಳು. ಇವರುಗಳಲ್ಲಿ ಮಸಣನ ಹೆಸರನ್ನು ಇನ್ನೂ ಕೆಲವು ದೇವಾಲಯಗಳಲ್ಲಿ ಗಮನಿಸಬಹುದು.

ನುಗ್ಗೇಹಳ್ಳಿ ಲಕ್ಷ್ಮೀನರಸಿಂಹ ದೇವಾಲಯವು ತ್ರಿಕೂಟಾಚಲ ದೇವಾಲಯವಾಗಿದ್ದು ಇದು ಚತುರಸ್ರವಾದ ದ್ರಾವಿಡ ವಾಸ್ತುವಿನ್ಯಾಸವನ್ನು ಹೊಂದಿರುವುದಾಗಿದೆ. ದೇವಾಲಯವು ವಿಶಾಲವಾದ ಜಗತಿಯನ್ನು ಸಹ ಹೊಂದಿದ್ದು ಅದರ ಮೇಲೆ ನಿರ್ಮಾಣವಾದುದಾಗಿದೆ. ಇದು ಸಂಪೂರ್ಣವಾಗಿ ವೈಷ್ಣವ ದೇವಾಲಯವಾಗಿದೆ. ತ್ರಿಕೂಟಾಚಲವಾದರೂ ಮುಖ್ಯ ಗರ್ಭಗೃಹದ ಮೇಲಿರುವ ಶಿಖರ ಮಾತ್ರ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿದ್ದು ನಂತರದ ಎರಡು ಶಿಖರಗಳು ತದನಂತರದ ಕಾಲದಲ್ಲಿ ನಿರ್ಮಾಣವಾಗಿವೆ. ಈ ದೇವಾಲಯದ ಬಾಹ್ಯ ಸೌಂದರ್ಯಕ್ಕೆ ಹೆಚ್ಚು ಹೊತ್ತು ನೀಡಲು ಬಹಳ ಅಲಂಕಾರಿಕವಾದ ಅಧಿಷ್ಠಾನದ ಪಟ್ಟಿಕೆಗಳು ಹಾಗೂ ಮೇಲ್ಭಾಗದ ಪೌರಾಣಿಕ ಕಥೆಯನ್ನು ನಿರೂಪಿಸುವ ಪಟ್ಟಿಕೆಗಳು ಬಹಳ ಅದ್ಭುತವಾಗಿ ಕಂಡುಬರುತ್ತವೆ. ನಂತರದಲ್ಲಿ ಕಂಡುಬರುವ ಭಿತ್ತಿ ಶಿಲ್ಪಗಳಂತೂ ಬಹಳ ಅಲಂಕಾರಿಕವಾಗಿ ಕೆತ್ತಲ್ಪಟ್ಟಿವೆ. ಕಿಕ್ಕೇರಿಯ ದೇವಾಲಯದ ಭಿತ್ತಿಶಿಲ್ಪಗಳ ಮೇಲೆ ವಿಮಾನದ ರಚನೆಗಳು ಕಂಡುಬಂದರೆ ಇಲ್ಲಿಯ ಶಿಲ್ಪಗಳ ಮೇಲ್ಭಾಗದಲ್ಲಿ ಮರದ ಕೊಂಬೆ ರೆಂಬೆಗಳು, ಲತಾಸುರುಳಿಯಾಕಾರದ ಬಳ್ಳಿಗಳನ್ನು ಬಾಗಿದ ರೀತಿಯಲ್ಲಿ ರಚಿಸಿದ್ದಾನೆ. ಇಲ್ಲಿನ ವಿಷ್ಣುವಿನ ಇಪ್ಪತ್ನಾಲ್ಕು ಅವತಾರಗಳ ಶಿಲ್ಪಗಳು, ನಾಟ್ಯ ಲಕ್ಷ್ಮಿ, ನಾಟ್ಯ ಸರಸ್ವತಿ, ಮಹಿಷಾಸುರ ಮರ್ದಿನಿ, ಮೋಹಿನಿ, ರತಿ–ಮನ್ಮಥರು, ಲಕ್ಷ್ಮಿನಾರಾಯಣ, ವಾಮನ, ತ್ರಿವಿಕ್ರಮ ಹೀಗೆ ಹಲವು ಶಿಲ್ಪಗಳನ್ನು ಇಲ್ಲಿ ಕೆತ್ತಲಾಗಿದೆ. ಹಲವು ಶಿಲ್ಪಗಳ ಪೀಠದ ಕೆಳಭಾಗದಲ್ಲಿ ಶಿಲ್ಪದ ಹೆಸರು ಮತ್ತೆ ಆ ಶಿಲ್ಪವನ್ನು ಕೆತ್ತಿದವರ ಹೆಸರುಗಳನ್ನು ಸಹ ಕಂಡರಿಸಲಾಗಿದೆ. ಇದರಿಂದ ಹೊಯ್ಸಳರ ಕಾಲದಲ್ಲಿ ಶಿಲ್ಪಿಗಳಿಗೆ ತಮ್ಮ ಹೆಸರನ್ನು ಕಂಡರಿಸಲು ಯಾವುದೇ ಕಟ್ಟುಪ್ಪಣೆಗಳು ಇಲ್ಲವೆಂದು ತೋರುತ್ತದೆ.

ಇಲ್ಲಿಯ ಶಿಲ್ಪಿಗಳಾದ ಮಲ್ಲಿತಮ್ಮ, ಬೈಚೋಜರು ಇಲ್ಲಿನ ಪ್ರಮುಖ ಶಿಲ್ಪಿಗಳಾಗಿ ಮೆರೆದಿದ್ದಾರೆ. ಅವರುಗಳು ಶಿಲ್ಪದ ರಚನೆಯಲ್ಲಿ ತಮ್ಮ ಕೈಚಳಕವನ್ನು ತೋರಿಸಿಕೊಟ್ಟಿದ್ದಾರೆ. ದೇವಾಲಯದ ಅದಿಷ್ಠಾನದ ಅಲಂಕಾರಿಕ ಪಟ್ಟಿಕೆಗಳು ಹಾಗು ಭಿತ್ತಿಯಲ್ಲಿನ ಅಲಂಕಾರಿಕ ಶಿಲ್ಪಗಳನ್ನು ಗಮನಿಸಿದಾಗ ಎಲ್ಲಾ ಶಿಲ್ಪಗಳು ಒಂದೇ ವಿನ್ಯಾಸಕ್ಕೆ ಒಳಗೊಂಡಂತೆ ಅವುಗಳ ಕಥೆಯನ್ನು ನಿರೂಪಿಸುವಂತೆ ಶಿಲ್ಪಿಯು ಕಂಡರಿಸಿದ್ದಾನೆ. ಈ ಶಿಲ್ಪಗಳ ವಿನ್ಯಾಸದ ಹೊಂದಾಣಿಕೆ, ಅನುಕರಣೆ ಮತ್ತು ಅವುಗಳನ್ನು ಅರ್ಥಬದ್ಧವಾಗಿ ಕ್ರಮವಾಗಿ ಚಿತ್ರಿಸಿರುವ ವಿಧಾನವು ಬಹಳ ತ್ರಾಸದ ಕೆಲಸವಾದರೂ ಸಹ ಶಿಲ್ಪಿಗಳು ಇದನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ. ಶಿಲ್ಪಿಗಳು ತಮ್ಮ ಕೆತ್ತನೆಯ ಮೂರ್ತಿ ಶಿಲ್ಪಗಳಿಗೆ ಕಿರೀಟ, ಮಣಿಹಾರ, ಕಂಠಿಹಾರ, ವಡ್ಯಾಣ, ಬಳೆ, ಉಂಗುರ, ಪಾಡಗ ಮುಂತಾದ ಆಭರಣಗಳನ್ನು ಕೆತ್ತಿದ್ದು ಇಡಿ ಶಿಲ್ಪಗಳು ಬಹಳ ಅಲಂಕಾರಿಕವಾಗಿ ಕಾಣುವಂತೆ ಮಾಡಿದ್ದಾರೆ. ಇವುಗಳ ಜೊತೆಯಲ್ಲಿ ಗಿಡ ಬಳ್ಳಿಗಳ ರಚನೆ, ಸಂಗೀತ ಉಪಕರಣಗಳು, ಪ್ರಾಣಿ ಪಕ್ಷಿಗಳು, ಕುಸುರಿ ಕೆತ್ತನೆಯಿಂದ ಕೂಡಿದ ವಸ್ತ್ರದ ಅಲಂಕರಣೆಗಳು, ಪೀಠಗಳ ರಚನೆ, ಶಿಲ್ಪಗಳ ಮೇಲೆ ಹಾಗೂ ಸಣ್ಣ ಕಂಭಗಳ ಮೇಲೆ ವಿಮಾನದ ರಚನೆ ಹಾಗೂ ಅಲ್ಲಲ್ಲಿ ಸಣ್ಣ ಸಣ್ಣ ಶಿಲ್ಪಗಳನ್ನು ಕೆತ್ತಿದ್ದು ಇವುಗಳು ದೇವಾಲಯದ ಹೊರ ಅಲಂಕರಣೆಯು ಚೆನ್ನಾಗಿ ಕಾಣಲು ಸಹಕಾರಿಯಾಗಿವೆ.

ಲಕ್ಷ್ಮೀನರಸಿಂಹ ದೇವಾಲಯ ನಿರ್ಮಾಣವಾದ ಕಾಲದಲ್ಲಿಯೆ ಸದಾಶಿವ ದೇವಾಲಯವು ನಿರ್ಮಾಣವಾಗಿದ್ದರೂ ಸಹ ವಾಸ್ತು ಶೈಲಿಯ ದೃಷ್ಠಿಯಿಂದ ಬಹಳ ಮುಖ್ಯವಾದುದಾಗಿದೆ. ಇದರ ವಿಶೇಷವೆಂದರೆ ನಾಗರ ಶಿಖರವುಳ್ಳ ಸುಂದರವಾದ ದೇವಾಲಯವಾಗಿದೆ. ತಲವಿನ್ಯಾಸದಲ್ಲಿ ಅಷ್ಠಮುಖ ಕೋನಗಳುಳ್ಳ ನಕ್ಷತ್ರಾಕೃತಿಯನ್ನು ಹೊಂದಿರುವುದಾಗಿದೆ. ಹೊರಭಿತ್ತಿಯಲ್ಲಿ ನಾಗರ ಶೈಲಿಯ ಶಿಖರಗಳಿಂದ ಅಲಂಕೃತವಾಗಿದೆ. ಶಿಖರವು ಸಹ ಮೂರು ತಲಗಳಲ್ಲಿ ಇದ್ದು ಪ್ರತಿಯೊಂದು ಹೊರಚಾಚುವಿನಲ್ಲಿ ವಿಮಾನದ ರಚನೆ ಕಂಡುಬರುತ್ತದೆ. ಈ ಶಿಖರವು ದ್ರಾವಿಡ ಬಾಹ್ಯ ಲಕ್ಷಣವುಳ್ಳ ನಾಗರ ವಾಸ್ತುವಿನ್ಯಾಸದ ಶಿಖರವನ್ನು ಹೊಂದಿದೆ. ದೇವಾಲಯದ ಒಳಭಾಗದಲ್ಲಿ ದ್ವಾರಬಂಧಗಳು ಹಾಗೂ ನವರಂಗದಲ್ಲಿರುವ ಬಿಡಿಶಿಲ್ಪಗಳು, ಭುವನೇಶ್ವರಿಗಳು ಮತ್ತು ನಂದಿ ಮಂಟಪವು ಹೊಯ್ಸಳರ ಕಾಲದ ಶಿಲ್ಪ ಲಕ್ಷಣಗಳನ್ನು ಹೊಂದಿದ್ದು ಒಳಭಾಗದ ಅಲಂಕರಣೆಯನ್ನು ಲಕ್ಷ್ಮೀನರಸಿಂಹ ದೇವಾಲಯದ ಹೋಲಿಕೆಯಂತೆ ಸಾಮ್ಯತೆಯನ್ನು ಹೊಂದಿದೆ. ಈ ದೇವಾಲಯವು ಹೊಯ್ಸಳರ ಕಾಲದಲ್ಲಿ ನಾಗರವಾಸ್ತುವಿನ ಬಳಕೆ ಹಾಗೂ ಅಂದಿನ ಲಕ್ಷಣಗಳನ್ನು ತಿಳಿಸುವ ಒಂದು ರಚನೆಯಾಗಿದೆ. ಇದಲ್ಲದೆ ಇದರ ಪಕ್ಕದಲ್ಲಿರುವ ಚಂದ್ರಮೌಳೇಶ್ವರ ದೇವಾಲಯವೂ ಸಹ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದಂತಹ ಒಂದು ದೇವಾಲಯವಾಗಿದೆ.

ಇದರ ಬಹಳಷ್ಟು ಭಾಗ ಶಿಥಿಲವಾಗಿದೆ. ಆದರೆ ವಾಸ್ತುವನ್ನು ಗಮನಿಸಿದಾಗ ಇದು ಲಕ್ಷ್ಮೀನರಸಿಂಹ ಮತ್ತು ಸದಾಶಿವ ದೇವಾಲಯಕ್ಕಿಂತ ಪೂರ್ವದಲ್ಲಿ ನಿರ್ಮಾಣವಾದಂತಹ ದೇವಾಲಯವಾಗಿದೆ.

ಕಿಕ್ಕೇರಿ ಮತ್ತು ನುಗ್ಗೇಹಳ್ಳಿಯಲ್ಲಿರುವ ಹೊಯ್ಸಳ ದೇವಾಲಯಗಳ ಬಗ್ಗೆ ಹೇಳುವುದಾದರೆ ಈ ಎರಡು ಗ್ರಾಮದಲ್ಲಿ ಕ್ರಿ.ಶ. 11ನೇಯ ಶತಮಾನದಲ್ಲಿ ರಚಿತವಾದಂತಹ ವಾಸ್ತುಶೈಲಿಯೊಂದಿಗೆ ಕ್ರಿ.ಶ. 12-13ನೇಯ ಶತಮಾನದಲ್ಲಿ ನಿರ್ಮಾಣವಾದಂತಹ ಹೊಯ್ಸಳ ವಾಸ್ತುಗಳು ನಮಗೆ ದೊರೆಯುತ್ತವೆ. ಇಲ್ಲಿನ ವಾಸ್ತುಶೈಲಿಗಳಿಂದ ಹೊಯ್ಸಳರ ಕಾಲದ ಆರಂಭ ಕಾಲದಿಂದ ಹಿಡಿದು ಕೊನೆಯ ಕಾಲದವರೆಗೆ ಅವರ ವಾಸ್ತುವಿನ ಲಕ್ಷಣಗಳನ್ನು ತಿಳಿಯಬಹುದು. ನುಗ್ಗೇಹಳ್ಳಿಯ ಚಂದ್ರಮೌಳೇಶ್ವರ ಹಾಗೂ ಕಿಕ್ಕೇರಿಯ ಮಲ್ಲೇಶ್ವರ ದೇವಾಲಯಗಳು ಹೊಯ್ಸಳರ ಆರಂಭ ಕಾಲದ ವಾಸ್ತುವಾಗಿದ್ದರೆ ಬ್ರಹ್ಮೇಶ್ವರ, ಲಕ್ಷ್ಮೀನರಸಿಂಹ, ಸದಾಶಿವ ದೇವಾಲಯಗಳು ನಂತರದ ಕಾಲದಲ್ಲಿ ನಿರ್ಮಾಣವಾಗಿವೆ. ಇವುಗಳಿಂದ ಹೊಯ್ಸಳರ ವಾಸ್ತು ಮತ್ತು ಶಿಲ್ಪಕಲಾ ಇತಿಹಾಸದ ಕಾಲಘಟ್ಟಗಳನ್ನು ಇಲ್ಲಿ ನೋಡಬಹುದಾಗಿದೆ.

ಮೇಲೆ ವಿವರಿಸಿರುವ ದೇವಾಲಯಗಳು ಇಂದಿಗೂ ಉಳಿದಿದ್ದು ಜನಾಕರ್ಷಣೆಯ ಕೇಂದ್ರಗಳಾಗಿವೆ ಎಂದರೆ ಅವುಗಳ ವಾಸ್ತು ಮತ್ತು ಶಿಲ್ಪ ಕಲಾ ವೈಭವದಿಂದ ಮಾತ್ರ. ಇಂತಹ ದೇವಾಲಯಗಳನ್ನು ಸಾಂಸ್ಕೃತಿಕ ಕೇಂದ್ರಗಳನ್ನಾಗಿ ಮಾಡಿ ಅವುಗಳು ಸದಾ ಜೀವಂತವಾಗಿರಲು ಶ್ರಮಿಸಿದವರು ಅನೇಕ ರೂವಾರಿಗಳು ಇಂತಹ ರೂವಾರಿಗಳಲ್ಲಿ ಪ್ರಮುಖರಾದವರೆಂದರೆ ಮಲ್ಲಿತಮ್ಮ, ಬೈಚೋಜ, ಮಸಣ, ನಕರಚಾರಿ ಇವರುಗಳಲ್ಲದೇ ಇನ್ನೂ ಅನೇಕ ಜನ ರೂವಾರಿಗಳು ಮೇಲೆ ಚರ್ಚಿಸಿರುವ ದೇವಾಲಯಗಳಲ್ಲಿ ಕೆಲಸ ಮಾಡಿದ್ದಾರೆ. ಇವರು ತಾವು ನಿರ್ಮಿಸಿದ ದೇವಾಲಯಗಳ ಮೂಲಕ ಚಿರಸ್ಥಾನಗಳಿಸಿರುವ ಶಿಲ್ಪಿಗಳು ಗಮನಾರ್ಹರು ಮತ್ತು ಮಾನ್ಯರು.

ನನ್ನ ಸಂಶೋಧನೆಯ ಪ್ರಬಂಧದಲ್ಲಿ ಈಗಾಗಲೆ ಚರ್ಚಿಸಿರುವ ಅಧ್ಯಾಯಗಳಲ್ಲಿ ಅಲ್ಲಲ್ಲಿಯೆ ಸಂದರ್ಭೋಚಿತವಾಗಿ ನಮ್ಮ ಅಭಿಮತವನ್ನು ತಿಳಿಸಿದ್ದೇನೆ. ಹೀಗಾಗಿ ಮತ್ತೆ ಒಂದೊಂದು ಅಧ್ಯಯನದ ಉಪಸಂಹಾರ ಮಾದರಿಯ ಸಮಾರೋಪವನ್ನು ನೀಡಿರುವುದಿಲ್ಲ. ಅದರ ಅವಶ್ಯಕತೆಯು ಇಲ್ಲಿ ಮುಖ್ಯವಾಗಿರುವುದಿಲ್ಲ. ಒಟ್ಟಾರೆಯಾಗಿ ಈ ಪ್ರಬಂಧದಲ್ಲಿ ಕೆಲವೆ ದೇವಾಲಯಗಳನ್ನು ಅಧ್ಯಯನದ ವಸ್ತುವನ್ನಾಗಿ ತೆಗೆದುಕೊಂಡಿದ್ದರೂ ಸಹ ಒಂದು ಕಾಲದಲ್ಲಿ ನಿರ್ಮಾಣವಾದಂತಹ ವಿಭಿನ್ನ ಶೈಲಿಯ ದೇವಾಲಯಗಳನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಲಾಗಿದೆ. ಇದು ಹೊಯ್ಸಳರ ಕಾಲದ ಆರಂಭ ಶೈಲಿಯಿಂದ ಹಿಡಿದು ಅವರ ವಾಸ್ತುವು ಉತ್ತುಂಗಕ್ಕೇರಿದ ಕಾಲದ ವಾಸ್ತು ರಚನೆಯನ್ನು ತಿಳಿಸುವ ಒಂದು ಸಣ್ಣ ಅಧ್ಯಯನವಾಗಿದೆ.

# ಗ್ರಂಥಋಣ


ಅಪರ್ಣ ಕೂ.ಸ – ದೇವಾಲಯ ವಾಸ್ತುಶಿಲ್ಪ ಪರಿಚಯ, ಹಂಪಿ, 1999

ಕೃಷ್ಣರಾವ್ ಎಂ.ಎಚ್ – ಕನ್ನಡ ನಾಡಿನ ಚರಿತ್ರೆ - ಕರ್ನಾಟಕದ ಕಲೆ, ಬೆಂಗಳೂರು, 1976

ಕೃಷ್ಣರಾವ್ ಮತ್ತು ಕೇಶವಭಟ್ – ಕರ್ನಾಟಕದ ಇತಿಹಾಸ ದರ್ಶನ

ಗೋಪಾಲ್ ಬಾ.ರಾ – ಕರ್ನಾಟಕದ ಕಲೆ ಮತ್ತು ವಾಸ್ತು ಬೆಂಗಳೂರು, 1993

ಜ್ಞಾನಾನಂದ ಜಿ – ಶಿಲ್ಪಾದರ್ಶ, ಸಂಪುಟ 1 ಮತ್ತು 2 ಹಂಪಿ, 2002

ಚಿದಾನಂದ ಮೂರ್ತಿ ಎಂ. – ಕನ್ನಡ ಶಾಸನಗಳ ಸಾಂಸಕೃತಿಕ ಅಧ್ಯಯನ, ಬೆಂಗಳೂರು -2002

ತಿಪ್ಪೆರುದ್ರಸ್ವಾಮಿ ಎಚ್. – ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು, 1985

ದೇವುಡು ಎನ್. ಎಸ್ – ಕರ್ನಾಟಕ ಸಂಸ್ಕೃತಿ, ಬೆಂಗಳೂರು, 1961

ದೇವರಕೊಂಡಾರೆಡ್ಡಿ – ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ, ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು, 1994

ನರಸಿಂಹಮೂರ್ತಿ ಎ.ವಿ – ಕನ್ನಡ ಲಿಪಿಯ ಉಗಮ ಮತ್ತು ವಿಕಾಸ, ಮೈಸೂರು, 1968

– ಚಾಲುಕ್ಯ ವಾಸ್ತು ಶಿಲ್ಪ ಪರಿಚಯ, ಐ.ಬಿ.ಹೆಚ್, ಬೆಂಗಳೂರು, 1976

ರಮೇಶ ಎಚ್.ಬಿ – ಬೇಲೂರ ಬೆಡಗಿಯರು, ಹಾಸನ, 1980

ರಾಮಚಂದ್ರರಾವ್ ಎಸ್.ಕೆ. – ಭಾರತದ ದೇವಾಲಯ ನೆಲೆ–ಹಿನ್ನೆಲೆ, ಬೆಂಗಳೂರು, 1980

ರಾಜಗೋಪಾಲ್ ಟಿ.ಎಸ್ – ಬೇಲೂರು, ಬೆಂಗಳೂರು, 1972

– ಹಳೇಬೀಡು, ಬೆಂಗಳೂರು, 1973

– ಸೋಮನಾಥಪುರ, ಬೆಂಗಳೂರು, 1973

ರಘುನಾಥ ಭಟ್ ಎಚ್.ಆರ್ – ಹೊಯ್ಸಳ ವಾಸ್ತುಶಿಲ್ಪ ಪರಿಚಯ, ಬೆಂಗಳೂರು, 1979

ರಂಗಸ್ವಾಮಯ್ಯ, ಜಿ.ಆರ್ – ಕರ್ನಾಟಕದ ಸಂಕ್ಷಿಪ್ತ ಚರಿತ್ರೆ

ರಾಜಶೇಖರ, ಎಸ್ – ದಕ್ಷಿಣ ಭಾರತದ ವಾಸ್ತುಶಿಲ್ಪಕ್ಕೆ ಬಾದಾಮಿ ಚಾಲುಕ್ಯರ ಕೊಡುಗೆ,

ಮೈಸೂರು, ವಿ.ವಿ, 1996
ರಾಮಲಿಂಗಪ್ಪ, ಹೆಚ್ – ಕರ್ನಾಟಕದ ಇತಿಹಾಸ, 1999
ಶ್ರೀಕಂಠಶಾಸ್ತ್ರಿ ಎಸ್ – ಹೊಯ್ಸಳ ವಾಸ್ತುಶಿಲ್ಪ, ಮೈಸೂರು, 1965
ಶ್ರೀನಿವಾಸನ್ ಪಿ.ಆರ್ – ದಕ್ಷಿಣ ಭಾರತದ ದೇವಾಲಯಗಳು, ಮೈಸೂರು, 1959

## ಆಂಗ್ಲ ಭಾಷೆಯ ಗ್ರಂಥಗಳು

Acharya P.K - Indian Architecture according to Manasara Silpa Sastra, Madras, 1927
- A Dictionary of Hindu Architecture, Oxford, 1927
Brown Percy - Indian Architecture, Bombay, 1942
Balasubramanya S.R - The Early Chola Art, Bombay, 1966
Banarajea, J.N - The Development of Hindu Iconography, Calcutta, 1956
Basavaraju, K.R - History and Culture of Karnataka, Dharwad, 1984
Chakravarti P.C - Art of War in Ancient India, Delhi, 1941
Coelho William - The Hoysalavamsa, Bombay, 1950
Coomaraswamy A.K - The History of Indian and Indonesian Art, New York, 1926
Cousens H - The Medieval Temples of the Deccan, Calcutta, 1931
Chudamani Nanda Gopal - Dance and Music in the Temple Architecture
Dayananda Patel T - Kesava Temple Somanathpura, A Cultural Study, Delhi, 1990
Dasgupta, S.N - Fundamental of Indian Art, Bombay, 1960

Dayalan, O.L - Early Temples of South Indian Art, ASI, New Delhi, 1922

Desai P.B. - A History of Karnatak, 1970

Derett J.D.M - The Hoysalas A Medieval Indian Royal Family, Oxford, 1957

Diwakar R.R - Karnataka Through the Ages, 1968

Fergusson, james, H - History of Indian and Eastern Architecture, 1970

Gopinath Rao T.V - Elements of Hindu Iconography, Vol-I, 1961

Gerard Fockema - Hoysala Architecture Medieval Temples of Southern Karnataka, Built during Hoysala Rule, 1994

Jouven Dubreil.G - Dravidian Architecture, New Delhi, 1987

Kelleson Collyer - Hoysala Artists their Identity, Mysore, 1989

Michell, George - The Hindu Temple, Bombay, 1977

- Early Western Chalukyan Temple, 1975

Mookerjee A - The Art of India, Calcutta, 1969

Mugali R.S - The Heritage of Karnataka, Bangalore, 1946

Narasimhachar R - The Kesava Temple at Somanathapur, Mysore, 1919

- Kesava Temple at Belur, Bangalore, 1919

Rangaraju N.S - Hoysala Temples in Mandya and Tumkur Districts, Mysore, 1998

Settar S - Hoysala Scullptures in National Museum, Copenhagen, 1975

- Hoysala Temples, Bangalore, 1992

Sastri K.K - South Indian Images of Gods and Goddesses, Madras, 1916

Srinivasan, K.R - Temple of South India New Delhi, 1985

Stain, Burton - South Indian Temple, Delhi, 1978

Soundar Rajan, K.V - Indian Temple Styles, Delhi, 1972

Venkatesh Iyengar M - Popular Culture in Karnataka, Bangalore – 1983

## ಗೆಸೆಟಿಯರ್, ಮತ್ತು ವರದಿಗಳು

Surayanath U Kamath - Mysore Gazettier Vol ……….

Indian Archaeology - A Review

Indian Historical Quarterly Journal

Quarterly Journal of the Mythic Society

Art Journal Volumes

Mysore Archaeological Department Reports

South Indian Inscriptions

## ಛಾಯಾಚಿತ್ರಗಳ ವಿವರ

1. ಬ್ರಹ್ಮೇಶ್ವರ ದೇವಾಲಯದ ದಕ್ಷಿಣ ಭಾಗದ ನೋಟ
2. ಬ್ರಹ್ಮೇಶ್ವರ ದೇವಾಲಯದ ಶಿಖರ
3. ಬ್ರಹ್ಮೇಶ್ವರ ದೇವಾಲಯ ಭಿತ್ತಿ ಶಿಲ್ಪಗಳು
4. ಬ್ರಹ್ಮೇಶ್ವರ ದೇವಾಲಯದ ಉತ್ತರ ಭಾಗದ ನೋಟ
5. ಭೈರವಿ
6. ದ್ವಾರಪಾಲಕ ರತಿ–ಮನ್ಮಥ
7. ಮದನಿಕೆಯರ ಶಿಲ್ಪಗಳು
8. ಬ್ರಹ್ಮ ಸರಸ್ವತಿ
9. ಲಕ್ಷ್ಮೀನಾರಾಯಣ
10. ನಾಟ್ಯಸರಸ್ವತಿ
11. ಸಪ್ತಮಾತೃಕೆಯರು
12. ಗಣಪತಿ
13. ಮಹಿಷಾಮರ್ಧಿನಿ
14. ಚೆನ್ನಕೇಶವ
15. ಮದನಿಕೆ
16. ಮದನಿಕೆ
17. ಮದನಿಕೆ
18. ಮದನಿಕೆ
19. ಮದನಿಕೆ
20. ಪಾರ್ವತಿ
21. ನವರಂಗದ ಕಂಭ
22. ನಂದಿಮಂಟಪದ ಕಂಭಗಳು
23. ದ್ವಾರಪಾಲಕ
24. ದ್ವಾರಪಾಲಕ
25. ಭುವನೇಶ್ವರಿ

26. ಜನಾರ್ಧನ ದೇವಾಲಯದ ಹೊರ ಭಿತ್ತಿ

27. ಜನಾರ್ಧನ ದೇವಾಲಯದ ನವರಂಗ

28. ಮಲ್ಲೇಶ್ವರ ದೇವಾಲಯದ ನವಂರಗ ಮತ್ತು ಕಂಭಗಳು

29&30. ಮುಖಮಂಟಪದ ಕಂಭಗಳು

31. ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ, ಚಾಮುಂಡಿ, ಗಣಪತಿ, ಶಿವ?

32. & 33. ಲಕ್ಷ್ಮೀನರಸಿಂಹ ದೇವಾಲಯದ ಹೊರ ನೋಟ ದಕ್ಷಿಣ ಭಾಗ

34. ಜಗತಿ

35. ಅಧಿಷ್ಠಾನದ ಅಲಂಕರಣೆ ಪಟ್ಟಿಕೆಗಳು

36. ಹೊರ ಭಿತ್ತಿ ಶಿಲ್ಪಗಳು

37. ಬ್ರಹ್ಮ

38. ಮೋಹಿನಿ

39. ಹಯಗ್ರಿವ

40. ಉಗ್ರನರಸಿಂಹ

41. ವೇಣುಗೋಪಾಲ

42. ರತಿ-ಮನ್ಮಥ

43. ಹರಿಹರ

44. ದುರ್ಗಿ (ಮಹಾಕಾಳ)

45. & 46. ನವರಂಗದ ಭುವನೇಶ್ವರಿಗಳು

47. ಕೋಷ್ಠ ಹಾಗೂ ಶಿಖರ

48. ಕಂಭ

49. ಮುಖಮಂಟಪದಲ್ಲಿರುವ ಕಂಭಗಳು

50. ಸದಾಶಿವ ದೇವಾಲಯದ ಮುಖ್ಯದ್ವಾರ

51. ಸದಾಶಿವ ದೇವಾಲಯದ ಉತ್ತರ ಭಾಗದ ಪಾರ್ಶ್ವನೋಟ

52. ದೇವಾಲಯದ ಗರ್ಭಗೃಹದ ಹೊರಭಾಗ

53. ನಂದಿ ಮಂಟಪದ ಹೊರಭಾಗ

54. ಗಣಾಧಿಪತಿಗಳೊಂದಿಗೆ ಸಪ್ತಮಾತೃಕೆಯರು

55.& 56. ದೇವಾಲಯದ ಮುಂಭಾಗದಲ್ಲಿರುವ ಗಜ ಶಿಲ್ಪಗಳು

57. ಭಿತ್ತಿಯಲ್ಲಿರುವ ಜಾಲಂಧ್ರ

58. ಕುಳಿತಿರುವ ಭೈರವ

59. ಮಹಿಷಾಮರ್ಧಿನಿ

60. ಸುಬ್ರಹ್ಮಣ್ಯ

61. ಸೂರ್ಯ

62. & 63. ಭುವನೇಶ್ವರಿಗಳು

64. ಚಂದ್ರಮೌಳೇಶ್ವರ ದೇವಾಲಯದ ನವರಂಗದ ಕಂಭಗಳು

# ಸಂಕೇತಾಕ್ಷರಗಳು

| | | |
|---|---|---|
| ಎಂ.ಎ.ಆರ್ | – | ಮೈಸೂರು ಆರ್ಕಿಯಾಲಜಿಕಲ್ ರಿಪೋರ್ಟ್ |
| ಎ.ಕ.ಸಂ | – | ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ |
| ಚ.ಪ | – | ಚನ್ನರಾಯಪಟ್ಟಣ |
| ಕೃ.ರಾ | – | ಕೃಷ್ಣರಾಜಪೇಟೆ |
| ಚಿ.ಮ | – | ಚಿಕ್ಕಮಗಳೂರು |
| ತಿ.ನ | – | ತಿರಮಕೂಡಲು ನರಸೀಪುರ |
| ನಾ.ಮ | – | ನಾಗಮಂಗಲ |
| ನಂ.ಗೂ | -- | ನಂಜನಗೂಡು |

# ಕಿಕ್ಕೇರಿ ದೇವಾಲಯಗಳ ಛಾಯ ಚಿತ್ರಗಳು



1. ಬ್ರಹ್ಮೇಶ್ವರ ದೇವಾಲಯದ ದಕ್ಷಿಣ ಭಾಗದ ನೋಟ



2. ಬ್ರಹ್ಮೇಶ್ವರ ದೇವಾಲಯದ ಶಿಖರ



3. ಬ್ರಹ್ಮೇಶ್ವರ ದೇವಾಲಯ ಭಿತ್ತಿಶಿಲ್ಪಗಳು



4.ಬ್ರಹ್ಮೇಶ್ವರ ದೇವಾಲಯದ ಉತ್ತರ ಭಾಗದ ನೋಟ



5. ಭೈರವಿ



6. ದ್ವಾರಪಾಲಕ ರತಿ-ಮನ್ಮಥ



7. ಮದನಿಕೆಯರ ಶಿಲ್ಪಗಳು


8. ಬ್ರಹ್ಮ ಸರಸ್ವತಿ


9. ಲಕ್ಷ್ಮೀನಾರಾಯಣ


10. ನಾಟ್ಯಸರಸ್ವತಿ


11. ಸಪ್ತಮಾತೃಕೆಯರು


12. ಗಣಪತಿ


13. ಮಹಿಷಾಮರ್ಧಿನಿ


14. ಚೆನ್ನಕೇಶವ


15. ಮದನಿಕೆ


16. ಮದನಿಕೆ


17. ಮದನಿಕೆ


18. ಮದನಿಕೆ


19. ಮದನಿಕೆ


20. ಪಾರ್ವತಿ


21. ನವರಂಗದ ಕಂಭ


22.ನಂದಿಮಂಟಪದ ಕಂಭಗಳು


23. ದ್ವಾರಪಾಲಕ


24. ದ್ವಾರಪಾಲಕ


25. ಭುವನೇಶ್ವರಿ



26. ಜನಾರ್ಧನ ದೇವಾಲಯದ ಹೊರ ಭಿತ್ತಿ



27. ಜನಾರ್ಧನ ದೇವಾಲಯದ ನವರಂಗ



28. ಮಲ್ಲೇಶ್ವರ ದೇವಾಲಯದ ನವಂರಗ ಮತ್ತು ಕಂಭಗಳು





29&30. ಮುಖಮಂಟಪದ ಕಂಭಗಳು



31. ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ, ಚಾಮುಂಡಿ, ಗಣಪತಿ, ಶಿವ?

## ನುಗ್ಗಿಹಳ್ಳಿ ದೇವಾಲಯಗಳ ಛಾಯ ಚಿತ್ರಗಳು




32. & 33. ಲಕ್ಷ್ಮೀನರಸಿಂಹ ದೇವಾಲಯದ ಹೊರ ನೋಟ ದಕ್ಷಿಣ ಭಾಗ



34. ಜಗತಿ



35. ಅಧಿಷ್ಠಾನದ ಅಲಂಕರಣೆ ಪಟ್ಟಿಕೆಗಳು



36. ಹೊರ ಭಿತ್ತಿ ಶಿಲ್ಪಗಳು



37. ಬ್ರಹ್ಮ



38. ಮೋಹಿನಿ



39. ಹಯಗ್ರೀವ



40. ಉಗ್ರನರಸಿಂಹ



41. ವೇಣುಗೋಪಾಲ



42. ರತಿ–ಮನ್ಮಥ



43. ಹರಿಹರ



44. ದುರ್ಗಿ (ಮಹಾಕಾಳಿ)





45. & 46. ನವರಂಗದ ಭುವನೇಶ್ವರಿಗಳು


47. ಕೋಷ್ಠ ಹಾಗೂ ಶಿಖರ


48. ಕಂಭ


49. ಮುಖಮಂಟಪದಲ್ಲಿರುವ ಕಂಭಗಳು


50. ಸದಾಶಿವ ದೇವಾಲಯದ ಮುಖ್ಯದ್ವಾರ


51.ಸದಾಶಿವ ದೇವಾಲಯದ ಉತ್ತರ ಭಾಗದ ಪಾರ್ಶ್ವನೋಟ


52. ದೇವಾಲಯದ ಗರ್ಭಗೃಹದ ಹೊರಭಾಗ


53. ನಂದಿ ಮಂಟಪದ ಹೊರಭಾಗ



54. ಗಣಾಧಿಪತಿಗಳೊಂದಿಗೆ ಸಪ್ತಮಾತೃಕೆಯರು





55.& 56. ದೇವಾಲಯದ ಮುಂಭಾಗದಲ್ಲಿರುವ ಗಜ ಶಿಲ್ಪಗಳು



57. ಭಿತ್ತಿಯಲ್ಲಿರುವ ಜಾಲಂಧ್ರ



58. ಕುಳಿತಿರುವ ಭೈರವ



59. ಮಹಿಷಾಮರ್ಧಿನಿ



60. ಸುಬ್ರಹ್ಮಣ್ಯ



61. ಸೂರ್ಯ





62. & 63. ಭುವನೇಶ್ವರಿಗಳು



64. ಚಂದ್ರಮೌಳೇಶ್ವರ ದೇವಾಲಯದ ನವರಂಗದ ಕಂಭಗಳು

* * * * * * * * * * *

